Rare Book


ಪರಾಮರ್ಶನ ಗ್ರಂಥ
ಕ್ರ. ಸಂ. 110793
ಅಕ್ಷರ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
Scan ವಿದ್ಯಾರಣ್ಯ 1939
374:954
DPI

# KANARESE FIRST BOOK FOR GIRLS

1939

...s. ] Sixth Edition, 550 Copies. [ ಕ್ರಯ: ೪ಆಣೆ
29-7-1939.

Department of Public Instruction, Bombay.

ಮುಂಬಯಿ ಇಲಾಖೆಯೊಳಗಿನ ಸರಕಾರದ ವಿದ್ಯಾಖಾತೆ

# ಹೆಣ್ಣುಮಕ್ಕಳ
# ಕನ್ನಡ
# ಮೊದಲನೆಯ ಪುಸ್ತಕ.

ವ್ಹರ್ನ್ಯಾಕ್ಯುಲರ ಟೆಕ್ಸ್ಟಬುಕ್ಸ ರಿವ್ಹಿಜನ್ ಕಮಿಟಿಯವರಿಂದ ರಚಿತವಾದದ್ದು.

---

KANARESE

# FIRST BOOK FOR GIRLS

PREPARED BY THE VERNACULAR TEXTBOOKS
REVISION COMMITTEE.



Publishers:

DATTO NARAYAN & BROTHERS

"KAKAKUWA MANSION"

POONA NO: 2.

AKSHARA GRANTHALAYA



ACC.NO. 110793

...ರ ಕರ್ನಾಟಕ ಪುಸ್ತಕ ಭಾಂಡಾರ.
ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ, ಧಾರವಾಡ.

[Pr]ice 4 Annas. ] Sixth Edition, 550 Copies. [ ಕ್ರಯ: ೪ ಆಣೆ.

29-7-1939

# ಅನುಕ್ರಮಣಿಕೆ.

## ಅನುಕ್ರಮಣಿಕೆ.

ಹೆಣ್ಣುಮಕ್ಕಳ
ಕನ್ನಡ

# ಮೊದಲನೆಯ ಪುಸ್ತಕ.

---

## ೧ನೆಯ ಭಾಗ—ಸಾಮಾನ್ಯಜ್ಞಾನದ ಪಾಠಗಳು.

### ೧ನೆಯ ಪಾಠ.

### ಸಾರ್ವಭೌಮ ದಂಪತಿಗಳು.

ನಮ್ಮ ಹಿಂದುಸ್ತಾನದ ಈಗಿನ ಸಾರ್ವಭೌಮರು **ಆರನೆಯ ಜಾರ್ಜ್** ದೊರೆಗಳು. ಇಲಿಜಬೆಥ್ ಮಹಾರಾಣಿಯವರು ಅವರ ಹೆಂಡಿರು. ಈ ಸಾರ್ವಭೌಮದಂಪತಿಗಳು ಬಹು ದೂರದಲ್ಲಿರುವ ಇಂಗ್ಲಂಡ್‌ದೇಶದಲ್ಲಿರುವರು. ಅವರು ಹಿಂದುಸ್ತಾನ-ಇಂಗ್ಲಂಡಗಳನ್ನಲ್ಲದೆ ಇನ್ನೂ ಹಲವು ದೇಶಗಳನ್ನು ಆಳುವರು. ಅವರ ರಾಜ್ಯವು ಜಗತ್ತಿನ ಎಲ್ಲ ಭಾಗಗಳಲ್ಲಿ ಹಬ್ಬಿರುವದು. ಅವರ ರಾಜ್ಯಕ್ಕೆ **ಬ್ರಿಟಿಷ್-ಸಾಮ್ರಾಜ್ಯ**ವೆಂದು ಹೆಸರು. ಬ್ರಿಟಿಷ್‌ಸಾಮ್ರಾಜ್ಯವು ಭೂಮಿಯ ಮೇಲಿನ ಎಲ್ಲ ರಾಷ್ಟ್ರಗಳಲ್ಲಿ ಮಿಗಿಲಾದದ್ದಿರುವದು. ಇಂತಹ ದೊಡ್ಡ ಸಾಮ್ರಾಜ್ಯದ ಒಡೆಯರಾದ ನಮ್ಮ **ಆರನೆಯ ಜಾರ್ಜ್ ಚಕ್ರವರ್ತಿ**ಗಳ ಮತ್ತು **ಇಲಿಜಬೆಥ್ ಚಕ್ರವರ್ತಿನಿ**ಯವರ ಚರಿತ್ರವನ್ನು ಅರಿತುಕೊಳ್ಳುವದು ಅವರ ಪ್ರಜೆಗಳಾದ ನಮಗೆ ಗೌರವದ ಸಂಗತಿಯು.

**ಆರನೆಯ ಜಾರ್ಜ್**ರವರು ಪಂಚಮಜಾರ್ಜ್‌ಬಾದಶಹರ ಮತ್ತು ಮೇರಿ ಮಹಾರಾಣಿಯವರ ಮರುಚಲ ಮಕ್ಕಳು; ೧೮೯೫ನೆಯ ಇಸವಿಯ ಜೂನ್ ತಿಂಗಳ ೧೪ನೆಯ ತಾರೀಖಿನ ದಿವಸ ಹುಟ್ಟಿದರು; **ಪ್ರಿನ್ಸ್ ಆಲ್ಬರ್ಟ್** ಎಂಬದು ಇವರ ಮೊದಲಿನ ಹೆಸರು. ಪ್ರಿನ್ಸ್ ಆಲ್ಬರ್ಟರವರು ಬಾಲ್ಯದಲ್ಲಿ ತಾಯಿ-ತಂದೆಗಳ ಮತ್ತು ಅರಸುಮನೆತನದ ಎಲ್ಲ ಜನರ ಅಕ್ಕರತೆಯಲ್ಲಿ ಬೆಳೆದರು. ಪ್ರಿನ್ಸ್ ಎಡ್ವರ್ಡ್ ಎಂಬವರು ಇವರ ಅಣ್ಣಂದಿರು.



ಆರನೆಯ ಜಾರ್ಜ್ ಬಾದಶಹರು.

ಇವರ ತಂದೆಯವರಾದ ಪಂಚಮಜಾರ್ಜ್‌ಬಾದಶಹರು ಸುವಿಚಾರಿಗಳೂ ವಿದ್ಯಾಭಿಮಾನಿಗಳೂ ಇದ್ದದರಿಂದ ಮಕ್ಕಳ ವಿದ್ಯಾಭ್ಯಾಸಕ್ಕೆ ವಿಶೇಷವಾಗಿ ಲಕ್ಷ್ಯಕೊಡುತ್ತಿದ್ದರು. ಆದದರಿಂದ ಪ್ರಿನ್ಸ್ ಆಲ್ಬರ್ಟರವರಿಗೆ ಚಿಕ್ಕಂದಿನಿಂದ ಒಳ್ಳೆಯ ಶಿಕ್ಷಣವು ದೊರೆತಿರುವದು. ಯುದ್ಧವಿದ್ಯೆ,

ನೌಕಾವಿದ್ಯೆ, ರಾಜನೀತಿ ಇವುಗಳಲ್ಲಿ ಬಲ್ಲಿದರಾಗಿರುವರು. ಇವರು ಜಗತ್ತಿನ ಬಹು ಭಾಗಗಳಲ್ಲಿ ಪ್ರವಾಸಮಾಡಿ ಬಂದಿರುವರು. ಇದರಿಂದ ಇವರಲ್ಲಿ ಅರಸರಿಗೆ ಬೇಕಾಗುವ ಧೈರ್ಯ, ಚಾತುರ್ಯ, ದೃಢನಿಶ್ಚಯ ಮೊದಲಾದ ಎಲ್ಲ ಸದ್ಗುಣಗಳು ನೆಲೆಸಿರುವವು.

ಇವರು ೧೯೨೩ರಲ್ಲಿ **ಇಲಿಜಬೆಥ್** ಎಂಬ ರಾಜಕುಮಾರಿಯನ್ನು ಮದುವೆಯಾದರು. **ಮಹಾರಾಣಿ ಇಲಿಜಬೆಥ**ರವರು ಸ್ಕಾಟ್ಲಂಡದ ಒಂದು ಅರಸುಮನೆತನದಲ್ಲಿ ೧೯೦೦ರಲ್ಲಿ ಹುಟ್ಟಿದರು. ಇವರು ಸುಶಿಕ್ಷಿತೆಯರೂ, ವಿನಯವುಳ್ಳವರೂ, ರೀತಿ-ನೀತಿಗಳನ್ನು ಬಲ್ಲವರೂ ಇರುವರು.

**ಪ್ರಿನ್ಸ್ ಆಲ್ಬರ್ಟ**ರವರ ಅಣ್ಣಂದಿರಾದ ಎಡ್ವರ್ಡರವರು, ಹಿರಿಯ ಮಕ್ಕಳಾದದರಿಂದ ಪಟ್ಟಕ್ಕೆ ಒಡೆಯರಾಗಿದ್ದರೂ ಅವರು ತಮ್ಮ ಪಟ್ಟದ ಒಡೆತನವನ್ನು ಬಿಟ್ಟುಕೊಟ್ಟರು. ಆದದರಿಂದ ಮರುಚಲ ಮಕ್ಕಳಾದ **ಪ್ರಿನ್ಸ್ ಆಲ್ಬರ್ಟ**ರವರಿಗೆ ದೇವರ ಸಂಕಲ್ಪದಂತೆ ಚಕ್ರವರ್ತಿಗಳಾಗುವ ಯೋಗವು ಒದಗಿತು. ಆ ಮೇರೆಗೆ ಇವರು ೧೯೩೭ನೆಯ ಇಸವಿಯ ಮೇ ತಿಂಗಳ ೧೨ನೆಯ ತಾರೀಖಿನ ದಿವಸ **ಆರನೆಯ ಜಾರ್ಜ್** ಎಂಬ ಹೆಸರಿನಿಂದ ಬ್ರಿಟಿಷ್‌ಸಾಮ್ರಾಜ್ಯದ ಪಟ್ಟವನ್ನೇರಿದರು.

ನಮ್ಮ **ಸಾರ್ವಭೌಮ ದಂಪತಿ**ಗಳಿಬ್ಬರೂ ಸಾರ್ವಜನಿಕ ಕಾರ್ಯಗಳಿಗೆ ಮೆಚ್ಚಿದವರು. ಸಾಮಾನ್ಯಜನರ ವಿಷಯವಾಗಿ ಅವರಲ್ಲಿ ಸಹಾನುಭೂತಿಯು ನೆಲೆಸಿರುವದು. ಮಹಾರಾಣಿಯವರು ಚಿಕ್ಕವರಿರುವಾಗ ೧೯೧೪ನೆಯ ಇಸವಿಯಲ್ಲಿ ಮಹಾಯುದ್ಧವು ಆರಂಭವಾಯಿತು. ಆಗ ಇವರು ಗ್ಲ್ಯಾಮಿಸ್ ಎಂಬ ಪಟ್ಟಣದಲ್ಲಿ ಒಂದು ಆಸ್ಪತ್ರೆಯನ್ನು ಸ್ಥಾಪಿಸಿ, ಅಲ್ಲಿ ತಾವೂ ದಾಯಿಯಾಗಿ ನಿಂತು, ಯುದ್ಧದಲ್ಲಿ ಗಾಯಹೊಂದಿದ ಎಷ್ಟೋ ಜನರ ಆರೈಕೆಯನ್ನು ಮಾಡಿದರು.

ಈ ದಂಪತಿಗಳಿಗೆ ಈಗ ಇಬ್ಬರು ಹೆಣ್ಣುಮಕ್ಕಳಿರುವರು. ಹಿರಿಯ ಮಗಳು **ಇಲಿಜಬೆಥ್** ಎಂಬವರು ೧೯೨೬ರಲ್ಲಿ ಹುಟ್ಟಿದರು. ಕಿರಿಯ ಮಗಳು **ಮಾರ್ಗಾರೆಟ್‌ರೋಜ್** ಎಂಬವರು ೧೯೩೦ರಲ್ಲಿ ಹುಟ್ಟಿದರು.

ನಮ್ಮ ಬಾದಶಹರಿಗೂ ಮಹಾರಾಣಿಯವರಿಗೂ ಪ್ರಜೆಗಳಲ್ಲಿ ಪ್ರೀತಿ **ಬಹಳ.** ಅವರು ಹಿಂದುಸ್ತಾನದ ಪ್ರಜೆಗಳಾದ ನಮ್ಮ ಏಳಿಗೆಯ ವಿಷಯವಾಗಿ ಬಹಳ ಲವಲವಿಕೆಯುಳ್ಳವರಾಗಿರುವರು. ಸಿಂಹಾಸನಾರೋಹಣ ಸಮಾರಂಭದ ದಿವಸ ಪ್ರಜೆಗಳ ವಿಷಯವಾಗಿ ತಮ್ಮ ಸಹಾನುಭೂತಿಯನ್ನು ತೋರ್ಪಡಿಸಿದರು.

ನಮ್ಮನ್ನು ಮಕ್ಕಳಂತೆ ಪ್ರೀತಿಸಿ ನಮ್ಮ ಕಲ್ಯಾಣಕ್ಕೆ ಯತ್ನಿಸುವ ಈ **ಸಾರ್ವಭೌಮ ದಂಪತಿ**ಗಳಲ್ಲಿ ಭಕ್ತಿ ವಿಶ್ವಾಸಗಳನ್ನಿಡುವದೂ ಅವರಿಗೆ ಯಾವಾಗಲೂ ಏಳಿಗೆಯಾಗಲೆಂದು ಜಗದೀಶನನ್ನು ಬೇಡಿಕೊಳ್ಳುವದೂ ನಮ್ಮ ಕರ್ತವ್ಯವು.

---

## ೨ನೆಯ ಪಾಠ.

## ಜೋಕಾಲಿಯು.

ತ್ರಿಪುಡೆ.

ಇಂದು ಪಂಚಮಿ ಹಬ್ಬ ಹರುಷದ ದಿಬ್ಬ! ಬಾರೌ ಕೆಳದಿಯೇ ॥
ನಂದದಿಂ ಜೋಕಾಲಿಯಾಡಿ ವಿನೋದಪಡುವಾ ಕೆಳದಿಯೇ ॥ ೧ ॥

ಎಲಗೆ ನೋಡಿದು! ನಮ್ಮ ತೋಟವು ಬಕುಲಗಿಡವಗೊ ಕೆಳದಿಯೇ ॥
ಚೆಲುವ ರೆಂಬೆಗೆ ಕಟ್ಟಿದಾ ಜೋಕಾಲಿಯದರೊಳು ಕೆಳದಿಯೇ ॥ ೨ ॥

ಒಯ್ಯನೆಲರಿಂದಲೆವ ಬಕುಲವು ರೆಂಬೆಗಯ್ಯಿಂ ಕೆಳದಿಯೇ ॥
ಉಯ್ಯಲೆಯನಾಡಲ್ಕೆ ಕರೆವುದು ನೋಡು ನಮ್ಮನು ಸುಮತಿಯೇ ॥ ೩ ॥

ನಿನ್ನೊಡನೆ ನಲಿದಾಡ ಬಂದೆವು ಮಮತೆಯಿಂ ಜೋಕಾಲಿಯೇ ॥
ಮನ್ನಿಸೆಮ್ಮನು! ಕೆಡವಿ, ನೋಯಿಸಿ, ನಗೆಯ ಮಾಡದಿರೌ ಪ್ರಿಯೇ ॥ ೪ ॥

ಹರಿಯು ಹತ್ತಿತು ಭರದಿ ಜೀಕುತ ಹರಿಯ ಮುಟ್ಟಿದೆಸೀಗಳೇ ॥
ಸುರಿಸುವದು ಪೂಗಳನು ನೋಡೌ ಮೆಚ್ಚಿ ಬಕುಲವದಾಗಳೇ ॥ ೫ ॥

ಸುಳ್ಳಗಿನ ಸುಳಿಗಾಳಿ ಬೀಸಿರೆಯೇನು ಸೊಗಸಹಹಾ! ಪ್ರಿಯೇ ॥
ಚೆಲ್ವಪೂಗಳ ಕಂಪ ಮೂಗಿಗೆ ಕೊಟ್ಟು ಮೋಹಿಪುದೌ ಪ್ರಿಯೇ ॥ ೬ ॥

ಕೂದಲವ ಕುಣಿಸಾಡುವೀ ಬಿರುಗಾಳಿಯೂ ಕೇಳ್ ಕೆಳದಿಯೇ ॥
ಮೋದಗೊಳಿಸುವದಾದ್ದರಿಂ ಬಲುಜೀವ ನಾನಾಡಲ್ ಪ್ರಿಯೇ ॥ ೭ ॥
ಅಳಿಗಿಳಿಗಳಿಂಚರವದೆಷ್ಟಿಂಪಾಗಿ ಕೇಳುವದಾಲಿಸಾ ॥
ಪಲವು ಬಗೆ ಗಿಡಬಳ್ಳಿಯಿಂ ಬನಸಿರಿಯ ಭಾಗ್ಯವನೀಕ್ಷಿಸಾ ॥ ೮ ॥
ಮುದ್ದುಗೆಯೆ, ಸಾಕಿನ್ನೆನಗೆ ನೀನಾಡಬಾರಾ ಗೆಳತಿಯೇ ॥
ಬಿದ್ದಿಗಿದ್ದೀ! ಬಹಳ ಎಚ್ಚರದಿಂದ ಜೀಕಾಡಾ ಪ್ರಿಯೇ ॥ ೯ ॥
ಸೆರಗು ಸುತ್ತಿಕೊ ಕೊಂಬೆಗಿಂಬೆಗೆ ಸಿಕ್ಕುಗಿಕ್ಕೀತಾ ಪ್ರಿಯೇ ॥
ಅರಿವಿನಿಂದಾಚರಿಸುವದು ಗಡ! ನಿತ್ಯಕೆಲಸದೊಳಾಳಿಯೇ ॥ ೧೦ ॥
ಹೋಗುವಾ ಹೊತ್ತಾಯ್ತುನಡೆ, ಮನೆಗಿನ್ನು ಸಾಕಾ ಕೆಳದಿಯೇ ॥
ಹೋಗಿಬರುವೆವು ದಯವಿರಲಿ! ಪ್ರಿಯೆ, ಬಕುಲವೇ, ಜೋಕಾ
ಲಿಯೇ ॥ ೧೧ ॥
ಮಳೆಯು ಬರಲಿಲ್ಲೆಂದು ಗೌರೀಶನ ದಯದೊಳೊಳಿತಾಯಿತಾ ॥
ಎಲಗೆ ನಡೆ! ಹಸಿವಾಯ್ತು ತಂಬಿಟ್ಟೆನ್ಮಹಾದಿಯ ನೋಳ್ಪುದಾ ॥ ೧೨ ॥

---

**೩ನೆಯ ಪಾಠ.**

## ರಮೆಯ ಸಭ್ಯತೆ.

ಪಾರ್ವತೀಬಾಯಿಯು ಒಂದು ಮಹತ್ವದ ಕೆಲಸದ ಸಲುವಾಗಿ ಲಕ್ಷ್ಮೀದೇವಿಯೆಂಬ ಒಬ್ಬ ದೈವುಳ್ಳ ಹೆಣ್ಣುಮಗಳ ಮನೆಗೆ ಹೋಗ ಬೇಕಾಗಿತ್ತು. ಅವಳು ಗಾಡಿಯೊಳಗೆ ಕೂತುಕೊಂಡು ಬಂದು, ಆ ಮನೆಯ ಮುಂದೆ ಇಳಿದು ಹೋಗಿ ಕದವ ತಟ್ಟಿದಳು. ರಮೆಯು ಒಳಗಿಂದ 'ಯಾರವರು?' ಎಂದು ಕೇಳಿಕೊಂಡು ಕದವ ತೆರೆದಳು. ಈ ಮೊದಲು ಇವಳು ಪಾರ್ವತೀಬಾಯಿಯನ್ನು ನೋಡಿದ್ದಿಲ್ಲ. ಆದರೂ ಬರ್‍ರಿ‍ನ್ಮಾ, ಒಳಗೆ ಬರ್‍ರಿ ಎಂದು ಕರೆದಳು. ಅದಕ್ಕೆ ಪಾರ್ವತೀಬಾಯಿ

ಯು—ಮುದ್ದು ಮಗುವೇ, ನಿಮ್ಮ ತಾಯಿಯವರು ಮನೆಯಲ್ಲಿರುವರೋ? ಎಂದು ಕೇಳಲು, ರಮೆಯು ಸಭ್ಯನುಡಿಯಿಂದ—ಇಲ್ಲರವ್ವಾ, ಅವರು ಹೊರಗೆ ಹೋಗಿರುವರು. ಈಗ ಬಂದಾರು, ಆಳು ಕಳಿಸಿ ಕರಿಸುವೆನು; ಬಹಳ ಹೊತ್ತು ಹಾದೀ ನೋಡಬೇಕಾಗಲಿಕ್ಕಿಲ್ಲ; ಒಳಗೆ ಬರ್ರಿ, ತುಸು ಹೊತ್ತು ಕುಳಿತುಕೊಳ್ಳಿರಿ, ಎಂದು ನುಡಿದಳು. ಪಾರ್ವತೀಬಾಯಿಯು ಒಳಗೆ ಬರುತ್ತಿರಲು ಹೊಸ್ತಿಲವನ್ನು ಎಡವಿದ್ದರಿಂದ, ಅವಳ ಹೆಬ್ಬೊಟ್ಟು ಒಡೆದು ರಕ್ತವು ಸುರಿಯ ಹತ್ತಿತು. ಅದನ್ನು ನೋಡಿ ರಮೆಯು— ಅಯ್ಯೋ, ಪಾಪ! ಎಂಥ ಭರದಿಂದ ಎಡವಿದಿರಲ್ಲವ್ವಾ! ಎಂದು ನುಡಿದ ವಳೇ ಓಡುತ್ತೋಡುತ್ತ ಒಳಗೆ ಹೋಗಿ ತಂಬಿಗೆಯಲ್ಲಿ ನೀರು ತುಂಬಿ ಕೊಂಡು ಬಂದು ಆ ಗಾಯದ ಮೇಲೆ ಧಾರೆಗಟ್ಟಿ ಹನಿಸಹತ್ತಿದಳು. ತುಸು ಹೊತ್ತಿನಲ್ಲಿ ರಕ್ತ ಹರಿಯುವದು ಕಟ್ಟಾಯಿತು. ಕೂಡಲೆ ರಮೆಯು ಒಂದು ಜಮಖಾನೆಯನ್ನು ಹಾಸಿ, ಒಂದು ಲೋಡು ಇಟ್ಟು, ಅವಳನ್ನು ಕೂಡಿಸಿದಳು. ತಾನು ಒಳಗಿಂದ ಸ್ವಚ್ಛವಾದ ಅರಿವೆಯನ್ನು ತಂದು ತೋಯಿಸಿ, ಪಾರ್ವತೀಬಾಯಿಯು— ಮಗುವೇ, ರಕ್ತ ಹರಿಯುವದು ನಿಂತದೆ, ಒದ್ದೆ ಅರಿವೆ ಬೇಡ ಎಂದರೂ, ಕೇಳದೆ ಆಗ್ರಹದಿಂದ, ಒದ್ದೆ ಅರಿವೆ ಸುತ್ತಿದರೆ ತುಸು ಸಮಾಧಾನವೆನಿಸುವದು, ಎಂದು ಅನ್ನುತ್ತ ಮೆಲ್ಲನೆ ಅದನ್ನು ಬೊಟ್ಟಿಗೆ ಸುತ್ತಿದಳು. ಬಳಿಕ ಎಲೆ ಅಡಿಕೆಯ ತಬಕವನ್ನು ತಂದು ಮುಂದಿಟ್ಟಳು.

ಪಾ— ಕಂದಮ್ಮಾ, ನಾನು ಎಲೆ ಅಡಿಕೆ ತಿನ್ನುವದಿಲ್ಲ.

ರ— ಹಾಗಾದರೆ, ಬರೇ ಅಡಿಕೆಯ ಹೋಳು ಹಾಕಿಕೊಳ್ಳಿರಿ.

ಪಾ— ನನಗೆ ಅಡಿಕೆಯೂ ಸೇರುವದಿಲ್ಲ.

ರ— ಹಾಗಾದರೆ, ಈ ಯಾಲಕ್ಕೀಕಾಯಿಯನ್ನಾದರೂ ತಕ್ಕೊಳ್ಳಿರಿ.

ಹೀಗೆಂದು ಆಗ್ರಹದಿಂದ ಯಾಲಕ್ಕೀಕಾಯಿಯನ್ನು ಕೊಟ್ಟು ಒಳ ಗಿಂದ ನಿರ್ಮಲವಾದ ತಾಲಿಯಲ್ಲಿ ಕುಡಿಯುವ ನೀರನ್ನು ತುಂಬಿ ತಂದು

ಅವಳ ಮುಂದಿಟ್ಟು—ಅಮ್ಮಾ, ತಮಗೆ ಮತ್ತೇನು ಬೇಕು? ಅಪ್ಪನು ಇನ್ನೂ ಬರಲಿಲ್ಲ, ತಮಗೆ ಹೊತ್ತಾಗುವದು, ಎಂದು ವಿನಯದಿಂದ ನುಡಿದಳು.

ಪಾ—ನನಗೆ ತಡವಾಗುವದೆಂದು ನೀನು ಚಿಂತೆ ಮಾಡಬೇಡ. ಮೊದಲೇ ನಿಮ್ಮಪ್ಪನಿಗೆ ನಾನು ಬರುವೆನೆಂದು ಹೇಳಿಕಳಿಸಲಿಲ್ಲ; ಅದರಿಂದ ಅವರಾ ನಮ್ಮಾ ತಪ್ಪುಗಂಟಾಯಿತು. ಇರಲಿ, ಮುದ್ದು ನುಗುವೇ, ನಿನ್ನ ಈ ತರದ ಸಭ್ಯತನದ ಆದರೋಪಚಾರದಿಂದ ನನಗೆ ಬಹಳ ಸಂತೋಷವಾಯಿತು.

ರ—ತಾವು ಮನೆತನಕ ಬಂದದ್ದೇ ಭಾಗ್ಯವೆಂದು ನಾವು ತಿಳಿಯುವೆವು.

ಪಾ—ನಿನ್ನ ಓರಿಗೆಯ ಹುಡುಗೆಯರಲ್ಲಿ ವಿನಯ, ಸಭ್ಯತನ, ಮನೆತನಕ ಬಂದವರ ಆದರೋಪಚಾರ ಮಾಡುವದು ಮುಂತಾದ ಗುಣಗಳು ಇಷ್ಟುಮಟ್ಟಿಗಿರುವದು ಅಪರೂಪ.

ರ—(ನಾಚಿಕೊಂಡು) ತಮ್ಮ ಈ ಹೊಗಳಿಕೆಯ ನುಡಿಗಳು ಕೇವಲ ತಮ್ಮ ಮನಸ್ಸಿನ ದೊಡ್ಡತನವನ್ನು ತೋರಿಸುತ್ತವೆ. ನಾನು ಹೆಚ್ಚಿನದೇನು ಮಾಡಿರುವೆನು? ಬರೇ ನನ್ನ ಕರ್ತವ್ಯವನ್ನು ಮಾಡಿದ್ದೇನೆ.

ಪಾ—ನೀನು ಯಾವ ಸಾಲೆಗೆ ಹೋಗುತ್ತೀ? ಏನು ಕಲಿಯುತ್ತೀ?

ರ—ನಾನು ಸುಶೀಲಾಬಾಯಿಯವರ ಸಾಲೆಗೆ ಹೋಗುತ್ತೇನೆ. ಏಳನೆಯ ಪುಸ್ತಕ ಕಲಿಯುತ್ತೇನೆ.

ಪಾ—ಓಹೋ, ಅವರು ಹೆಸರಿನಂತೆಯೇ ಇರುತ್ತಾರೆ. ಹುಡುಗರಿಗೆ ಕೂಡ್ರುವ ರೀತಿಯನ್ನೂ, ಮಾತಾಡುವ ತರವನ್ನೂ, ಬರುಹೋಗುವವರನ್ನು ಆದರಿಸುವ ಬಗೆಯನ್ನೂ ಸರಿಯಾಗಿ ಕಲಿಸುವರು. ನಮ್ಮ ನೆರೆಮನೆಯ ತುಳಸಾಬಾಯಿಯು ನಿನ್ನಂತೆ ಸಭ್ಯ ನಡತೆಯವಳಿರುವಳು.

ರ—ಅಕ್ಕನವರ ಸಭ್ಯ ನಡತೆಯನ್ನೆಷ್ಟೆಂತ ಹೇಳಲಿ? ತುಳಸಾ

ಬಾಯಿಯು ನಮ್ಮ ವರ್ಗದೊಳಗೇ ಇರುವಳು. ಈ ಮೊದಲು ನಮಗೆ ಯಾರಾದರೂ ಕರೆದರೆ—'ಓ, ಯಾಕೆ?' ಎಂದು ಉತ್ತರ ಕೊಡುವ ಚಟವಿತ್ತು. ಅಕ್ಕನವರು ಆ ಚಟವನ್ನು ಬಿಡಿಸಿ, 'ಅಹುದಮ್ಮಾ, ಹೌದಮ್ಮಾ,' ಎಂದು ನುಡಿಯ ಹಚ್ಚಿದರು. ಎಲ್ಲರ ಕೂಡ ಏಕವಚನ ದಿಂದ ಮಾತಾಡುವದನ್ನು ಬಿಡಿಸಿ, 'ನೀವು,' 'ತಾವು' ಎಂದು ಬಹುವಚನ ದಿಂದ ಮಾತಾಡಲಿಕ್ಕೆ ಕಲಿಸಿದರು. ಮನೆಗೆ ಬಂದವರಿಗೆ ಬರ್ರಿ, ಕುಳಿತು ಕೊಳ್ಳಿರಿ, ನೀರು ತೆಗೆದುಕೊಳ್ಳಿರಿ, ಎಂದು ಮಿದುನುಡಿಗಳನ್ನಾಡಲಿಕ್ಕೆ ನಮ್ಮ ಗಂಟೇನು ಹೋಗುವದು? ಎಂದು ಅಕ್ಕನವರು ಬಾರಿಬಾರಿಗೆ ಹೇಳುವ ಬುದ್ಧಿಯಮಾತು ನಮ್ಮ ಮನಸ್ಸಿನಲ್ಲಿ ನೆಲೆಗೊಂಡಿವೆ.

ಈ ಮೇರೆಗೆ ಇವರಿಬ್ಬರು ಮಾತಾಡುತ್ತ ಕುಳಿತಿರುವಷ್ಟರೊಳಗೆ ಲಕ್ಷ್ಮೀದೇವಿಯು ಬಂದಳು. ಅವಳು ಪಾರ್ವತೀಬಾಯಿಯನ್ನು ಕಂಡು— ನನ್ನ ಹಾದೀ ನೋಡುತ್ತ ಬಹಳ ಹೊತ್ತು ಕೂಡ್ರಬೇಕಾಯಿತಲ್ಲರವ್ವಾ? ಎಂದು ನುಡಿಯಲು, ಪಾರ್ವತೀಬಾಯಿಯು— ಇಲ್ಲ, ಅಷ್ಟೇನೂ ತಡ ವಾಗಲಿಲ್ಲ. ಈ ನಿಮ್ಮ ರಮೆಯ ವಿನಯ, ಆದರ, ಉಪಚಾರ, ಪರೋಪ ಕಾರ ಮುಂತಾದ ಸದ್ಗುಣಗಳನ್ನು ಹೊಗಳದೆ ಬಿಡೆನು. ಅವಳನ್ನು ಕಂಡು ನನಗೆ ಬಹಳ ಸಂತೋಷವಾಯಿತು, ಎಂದು ನುಡಿದು ಬಂದ ಕೆಲಸ ತೀರಿಸಿಕೊಂಡು ಲಕ್ಷ್ಮೀದೇವಿಯ ನಿರೋಪ ತಕ್ಕೊಂಡು ಮನೆಗೆ ಹೋದಳು.

---

### ೪ನೆಯ ಪಾಠ.

## ಇಂದು ನಾಳೆ.

ಬ್ಯಾಂಡಿನಂತೆ.

ಇಂದು ಮತ್ತು ನಾಳೆ ಎಂಬ ಮಾತು ಪೇಳುವೆ ।<br>
ಸುಂದರೀಮಣೀ ಸುಂದರೀಮಣೀ ಸುಂದರೀಮಣೀ ॥ ಪಲ್ಲ ॥

ತನಗೆ ಪರಗೆ ಹಿತವು ಇಂದು ಇಂದು ಚಂದವು ।
ಜನವ ಕಾಡುವದರಲ್ಲಿ ಇಲ್ಲ ಗಂಧವು ॥ ಅನುಪಲ್ಲ ॥
ದೈವ ನಗುತ ದಾರಿಯಲ್ಲಿ ಹೂವ ತೋರಿಸೆ ।
ಆವ ವೇಳೆ ಕೊಯ್ಯಬೇಕು ಬುಟ್ಟಿ ಸೇರಿಸೆ? ॥
ಇಂದೆ ಇಂದೆ ಇಂದೆ ಈ ಹೊತ್ತೆ ಸುಂದರೀ ।
ಇಂದೆ ಈ ಹೊತ್ತು ನಾವು ಹೂವ ಕೊಯ್ಯುವಾ ॥ ೧ ॥

ಕಾಲ ನಮ್ಮ ಮೇಲೆ ಮುನಿದು ಎಡರು ಒದಗಿರೆ ।
ಶೀಲವಂತೆ ಚಿಂತೆ ಯಾವಾಗ ಮಾಡಲಿ? ॥
ನಾಳೆ ನಾಳೆ ನಾಳೆ ಚಿಂತೆ ನಾಗವೇಣಿಯೇ ।
ಚಿಂತೆ ಕೇಳು ಜನದ ಸಂತೆ ಮುಗಿಸುವಂತಿದೆ ॥ ೨ ॥

ಕ್ಷಮೆಯ ಮಾಡುವಂಥ ಕಾಲವಾವುದೇ ಸಖೀ? ।
ಇಂದೆ ಈ ಹೊತ್ತೆ ನೋಡು ಚಂದಿರಮುಖೀ ॥
ಸೇಡು ತೀರಿಸುವ ಕಾಲವಾವುದೆಂದೆನೆ ।
ನೋಡು ನಾಳೆ ನಾಳೆ ಕೇಳು ಮುಂದೆಯೊಂದಿನ ॥ ೩ ॥

ಸರ್ವಲೋಕಹಿತವು ಧರ್ಮವಾವ ಕಾಲಕೆ? ।
ಪರ್ವಕಾಲದಂತೆ ಹಾಕಬೇಡ ಮುಂದಕೆ ॥
ಮನವನಾವಾಗ ಜಯಿಸಲೆಂದು ಕೇಳಿದೆ ।
ದಿನವೆ ಇಂದೀನ ದಿನವೆ ಜಯಿಸು ಕೇಳಿದೆ ॥ ೪ ॥

---

## ೫ನೆಯ ಪಾಠ.

## ತಾಳ್ಮೆ.

ನಮಗೆ ಸೇರದ ಸಂಗತಿಗಳು ಅಥವಾ ಮನಸ್ಸಿಗೆ ಬಾರದ ಸಂಗತಿಗಳು ದಿನಾಲು ಎಷ್ಟೋ ನಡೆಯುತ್ತವಲ್ಲವೆ? ನೋಡಿರಿ, ನಮ್ಮ ಮನೆ

ಯವರಲ್ಲಿ ಒಬ್ಬರು ಜಗಳಗಂಟರು ಇದ್ದು ನಮಗೆ ತೊಂದರೆಗೊಳಿಸುತ್ತಿರ ಬಹುದು; ಸುಮ್ಮಸುಮ್ಮನೆ ಕೆಟ್ಟ ಮಾತುಗಳನ್ನಾಡಿ ನಮ್ಮ ಮನಸ್ಸನ್ನು ನೋಯಿಸುತ್ತಿರಬಹುದು; ಕೆಲವೊಬ್ಬರು ಹಗಲೆಲ್ಲ ತಪ್ಪು ಎಣಿಸುವ ಚಟದವರಿದ್ದು 'ನೀವು ಅಂಥ ತಪ್ಪುಮಾಡಿದಿರಿ, ಇಂಥ ತಪ್ಪುಮಾಡಿ ದಿರಿ,' ಎಂದು ಮಾತುಮಾತಿಗೆ ತಪ್ಪು ಹಚ್ಚಬಹುದು; ಮತ್ತೊಬ್ಬರು ಸುಳ್ಳುಹೇಳುವವರಿದ್ದು ನಮಗೆ ಆಗಾಗ್ಗೆ ಅಸಮಾಧಾನವನ್ನುಂಟುಮಾಡು ತ್ತಿರಬಹುದು; ಇನ್ನೊಬ್ಬರು ತಮ್ಮ ಕೆಟ್ಟ ಚಟದಿಂದ ತಲೆಬೇಸರವನ್ನು ಹುಟ್ಟಿಸಬಹುದು; ಬೇರೊಬ್ಬರು ತಿಳಿದಾಗಲಿ, ತಿಳಿಯದಾಗಲಿ ನಮ್ಮನ್ನು ಪೀಡಿಸಿ ರೇಗಿಸಬಹುದು; ಇಲ್ಲವೆ ಬಾಯಿಗೆ ಬಂದಂತೆ ಅಂದು ನಮಗೆ ತ್ರಾಸಕೊಡಬಹುದು.

ಎಷ್ಟೋ ಸಾರೆ ನಮ್ಮ ಕೃತಿಗಳಿಂದಲೇ ನಮಗೆ ಕೆಡಕೆನಿಸುವದು. ನಮ್ಮ ಎಚ್ಚರಗೇಡಿತನದಿಂದ ಕೆಲವು ಒಡವೆಗಳು ಒಡೆಯುವವು, ಕಳೆದು ಹೋಗುವವು, ಹಾಳಾಗುವವು. ಅಳತೆಗೆಟ್ಟು ಉಂಡು ಇಲ್ಲವೆ ಚೆನ್ನಾಗಿ ನುರಿಸದೆ ಗಬಗಬ ನುಂಗಿ, ಇಲ್ಲವೆ ಬಿಸಿಲು, ಮಳೆ, ಗಾಳಿಯಲ್ಲಿ ಬರಿಮೈ ಯಿಂದ ತಿರುಗಾಡಿ, ಬೇನೆಯನ್ನು ತಂದುಕೊಳ್ಳುವೆವು. ವಿಚಾರವಿಲ್ಲದೆ ಆಡಬಾರದ ಮಾತುಗಳನ್ನಾಡಿ, ಪರರ ದ್ವೇಷವನ್ನು ಕಟ್ಟಿಕೊಳ್ಳುವೆವು. ಎರಡನೆಯವರ ಹಗೆತನವ ಗಂಟಿಕ್ಕಿಕೊಂಡರೆ, ನಮಗೂ ಹೇಳಕೂಡದಷ್ಟು ದುಃಖವಾಗುವದು.

ಅನೇಕ ಸಂಗತಿಗಳು ನಮ್ಮ ಕೈಯೊಳಗಿರುವದಿಲ್ಲ. ಮಳೆಯು ಬೇಡಾದ ಸಮಯದಲ್ಲಿ ಬಿರುಮಳೆಯು ಸುರಿಯುವದರಿಂದ ಒಣಗ ಹಾಕಿದ ಕಾಳುಗಳೂ ಅರಿವೆಗಳೂ ಕೆಟ್ಟುಹೋಗುವವು. ನಾವೊಂದು ಮಹತ್ವದ ಕೆಲಸಕ್ಕೆ ಹೋಗುವದು ನಿಂತುಹೋಗುವದು. ಬಿಸಿಲು ಬೇಕಾದಾಗ ಮೋಡ ಬರುವದು, ಮೋಡ ಬೇಕಾದಾಗ ರಣರಣ ಬಿಸಿಲು ಸುರಿಯುವದು. ಹಬ್ಬದಂಥ ಆನಂದದ ದಿವಸ ಕೆಟ್ಟ ಸುದ್ದಿಯು ಬಂದು

ನಮ್ಮ ಆನಂದವೆಲ್ಲ ಅಳಿದುಹೋಗುವದು; ಒದಗಿದ ಸುಖದ ಪ್ರಸಂಗವು ನಮ್ಮನ್ನು ದುಃಖಕ್ಕೆ ಗುರಿ ಮಾಡುವದು.

ಇಂಥ ಪ್ರಸಂಗಗಳು ಒದಗಿದಾಗ ಕೆಲವರು ಅಂಜಿ ಎದೆ ಒಡಕೊಳ್ಳುವರು. ತಮ್ಮ ಮನಸ್ಸಿಗೆ ಬಾರದಂತೆ ಯಾರಾದರೂ ನಡೆದರೆ ಅವರು ಸಿಟ್ಟಿಗೇಳುವರು, ಅವರೊಡನೆ ಜಗಳಾಡುವರು, ಬಡಿದಾಡುವರು. ತಮಗೊಂದು ತುಸು ಗಾಯವಾದರೂ ಒಟಗುಟ್ಟುವರು, ಇಲ್ಲವೆ ಸಿಟ್ಟಿಗೇಳುವರು. ಒಂದು ವೇಳೆ ಅವರಿಗೆ ದುರ್ದೈವದ ಹೊತ್ತು ಬಂದರಂತೂ ಇಂಥವರ ಸ್ಥೈರಣೆಯೇ ಮಾಯವಾಗುವದು. ಇಂಥವರು ತಾವು ಸದಾ ದುಃಖದಲ್ಲಿದ್ದುಕೊಂಡು ಮಂದಿಗೂ ತಾಪ ಕೊಡುತ್ತಾರೆ.

ಇಂಥ ಪ್ರಸಂಗಗಳು ಒದಗಿದರೆ ತಾಳ್ಮೆಯುಳ್ಳವನು ಮನಸ್ಸಿಗೆ ಹಚ್ಚಿಕೊಳ್ಳುವದಿಲ್ಲ. ಎಲ್ಲ ಸಂಗತಿಗಳು ತನ್ನ ಬಯಕೆಯಂತೆಯೇ ಆಗಬೇಕೆಂದು ಅವನು ಬಯಸುವದಿಲ್ಲ. ಅವನು ತಾನು ದೊಡ್ಡ ಮನುಷ್ಯನಿರುತ್ತೇನೆ, ತನ್ನ ಇಚ್ಛೆಯಂತೆಯೇ ಎಲ್ಲರೂ ನಡೆದುಕೊಳ್ಳಬೇಕೆಂದು ಅನ್ನುವದಿಲ್ಲ. ಬೇಡಾದ ಸಂಗತಿಗಳು ಒದಗಿದರೆ ಅವನು ಅಸಮಾಧಾನ ಪಡುವದಿಲ್ಲ. ಅಸಮಾಧಾನವೇ ಇಲ್ಲದ ಮನುಷ್ಯನಿಗೆ ಕೆಡಕೆನಿಸಿಕೊಳ್ಳುವದಕ್ಕಾಗಲಿ, ಇಲ್ಲವೆ ಸಿಟ್ಟಿಗೇಳುವದಕ್ಕಾಗಲಿ ಕಾರಣವೇ ಇಲ್ಲ. ಎರಡನೆಯವರ ಮಾತಿನಿಂದ ಅವನು ಎಂದಿಗೂ ಸಿಟ್ಟಿಗೇಳುವದಿಲ್ಲ. ದುರ್ದೈವದಿಂದ ತನಗೆ ಒದಗಿದ ಎಲ್ಲ ವಿಪತ್ತುಗಳನ್ನು ಸುಮ್ಮನೆ ತಾಳಿಕೊಳ್ಳುತ್ತಾನೆ. ಹೀಗೆ ಮಾಡುವದರಿಂದ ತಾನೂ ಸುಖದಿಂದಿರುವನು, ಮಂದಿಗೂ ಸುಖ ಕೊಡುವನು.

ದುಃಖದಲ್ಲಿ ಮುಳುಗಿದ ಹೆಂಗಸು ತನಗೆ ಸೀತಾದೇವಿಯಂತೆ ದುಃಖ ಪರಂಪರೆಯನ್ನು ಅನುಭವಿಸಬೇಕಾಯಿತೆಂದು ಬಗೆಯುವಳು. ಮತ್ತು ಮನಸ್ಸಿನಲ್ಲಿ—"ಅಯ್ಯೋ!, ಸೀತಾದೇವಿಯಂಥ ಗುಣವಂತೆಗೆ ಸಹ ಎಷ್ಟು ಸಂಕಟಗಳು ಒದಗಿದವಲ್ಲ! ಆಕೆ ಹಲವು ವರ್ಷ ಅರಣ್ಯದಲ್ಲಿ ನವೆ

ದಳು; ಅನ್ನವಿಲ್ಲದೆ ಹಣ್ಣುಹಂಪಲ ಗಡ್ಡೆಗೆಣಸುಗಳನ್ನು ತಿಂದು ಬದುಕಿದಳು; ಇಂಥ ಕಷ್ಟದಲ್ಲಿ ಅವಳನ್ನು ರಾವಣನು ಎತ್ತಿ ಕೊಂಡೊಯ್ದು ಲಂಕೆಯಲ್ಲಿ ಸೆರೆಯಲ್ಲಿಟ್ಟನು; ಬಂಗಾರದಂಥ ಗಂಡನನ್ನಗಲಿ, ರಾಕ್ಷಸನ ಕೈಯೊಳಗೆ ಇರಬೇಕಾಯಿತು; ಬಿಡುಗಡೆ ಹೊಂದಿ ಬಂದ ಬಳಿಕ ಅವಳಿಗೆ ಅಯೋಧ್ಯೆಯ ಜನರು ಕೆಟ್ಟ ಮಾತು ಹೊರಿಸಿದರು; ಅದರಿಂದ ಸೀತೆಯು ಮತ್ತೆ ವನವಾಸದ ಕಷ್ಟಕ್ಕೆ ಗುರಿಯಾದಳು. ಅಹಾ! ಇಷ್ಟು ಸಂಕಟಗಳೊದಗಿದರೂ ಆಕೆಯು ಅವೆಲ್ಲವುಗಳನ್ನು ಧೈರ್ಯದಿಂದ ತಾಳಿಕೊಂಡಳಲ್ಲವೇ," ಎಂದು ಸಮಾಧಾನ ಹಚ್ಚಿಕೊಳ್ಳದೆ ಇರಳು.

---

## ೬ನೆಯ ಪಾಠ.

## ಕೆಲಸದ ಮೇಲಿನ ಪ್ರೀತಿ.

ಶಿಕ್ಷಿಕೆ—'ಹೊರಬಿದ್ದರೆ ಮೇವು, ಮನೆ ಹಿಡಿದರೆ ಉಪವಾಸ' ಎಂಬ ಈ ಮಾತಿನ ಅರ್ಥವೇನು? ಬಲ್ಲಿರಾ?

ಗೋದಾವರಿ—ಹೌದು, ಬಲ್ಲೆವು. ದನವನ್ನು ಮನೆಯಲ್ಲಿಯೇ ಕಟ್ಟಿ ಹಾಕಿದರೆ ಅದಕ್ಕೆ ಮೇವು ಸಿಕ್ಕಲಾರದು, ಆದರೆ ಅದನ್ನು ಅಡವಿಗೆ ಹೊಡೆದುಬಿಟ್ಟರೆ ಅದು ಮೇಯುವದು. ಆದ್ದರಿಂದ ಈ ಮಾತು ದನಕ್ಕೆ ಹಚ್ಚುವದು ತಕ್ಕದ್ದು.

ಶಿ—ತಂಗೀ ಗೋದಾವರಿ, ಈ ಮಾತಿನ ಅರ್ಥವನ್ನು ಚೆನ್ನಾಗಿ ತಿಳಿಸಿ ಹೇಳಿದೆ. ಇನ್ನು ಇದನ್ನು ಮನುಷ್ಯರಿಗೆ ಹಚ್ಚಬಹುದೋ?

ಗಂಗೆ—ಮನುಷ್ಯರು ದನವಲ್ಲ. ದನದಂತೆ ಮನುಷ್ಯರು ಮೇಯಲಿಕ್ಕೆ ಹೋಗಬೇಕಾಗುವದಿಲ್ಲ; ಆದ್ದರಿಂದ ಇದನ್ನು ಮನುಷ್ಯರಿಗೆ ಹಚ್ಚುವದೆಂತು?

ಶಿ—ಮನುಷ್ಯರು ದನಗಳಂತೆ ಮೇಯಲಿಕ್ಕೆ ಹೋಗುವದಿಲ್ಲವೆಂಬುದು ನಿಜವು; ಆದರೆ, ದನಗಳಂತೆಯೇ ಮನುಷ್ಯರಿಗೆ ಆಹಾರ

ಬೇಕಲ್ಲವೇ? ಅಂದ ಮೇಲೆ ಅವರು ಆಹಾರವನ್ನು ಹೇಗೆ ದೊರಕಿ ಸುವರು?

ಯಮುನೆ—ಜನರು ಕೆಲಸ ಮಾಡಿ ದುಡ್ಡು ಗಳಿಸುವರು. ಆ ದುಡ್ಡಿ ನಿಂದ ಕಾಳು ಕೊಂಡುತರುವರು. ಅವುಗಳಿಂದ ಅಡಿಗೆ ಮಾಡಿಕೊಂಡು ಉಣ್ಣುವರು.

ಶಿ—ಹೌದು, ಜನರು ದುಡಿಯದಿದ್ದರೆ, ದುಡ್ಡಾಗಲಿ ಅನ್ನವಾಗಲಿ ಸಿಗಲಾರದು. ತಂದೆತಾಯಿಗಳು ಮಕ್ಕಳಿಗೆ ಅನ್ನವನ್ನು ಗಳಿಸುವರು. ಅಂದರೆ ಮಕ್ಕಳ ಸಲುವಾಗಿ ಅವರು ಹೆಚ್ಚು ದುಡಿಯಬೇಕಾಗುವದು. ಒಳ್ಳೆಯದು, ಇನ್ನು ಸಣ್ಣ ಮಕ್ಕಳು ದುಡಿಯಬೇಕೋ?

ಗೋ—ಮಕ್ಕಳು ದುಡಿಯುವ ಆವಶ್ಯಕತೆಯೇನು? ಅವರು ಯಾವ ಕೆಲಸ ಮಾಡಿ ಏನು ಗಳಿಸಬಲ್ಲರು?

ಶಿ—ಎಲ್ಲ ಕೆಲಸವನ್ನು ದುಡ್ಡು ಗಳಿಸಬೇಕೆಂಬ ಒಂದೇ ಉದ್ದೇಶ ದಿಂದ ಕೈಕೊಳ್ಳುವದಿಲ್ಲ. ಈ ನಮ್ಮ ದೇಶದಲ್ಲಿ ಕುಟುಂಬದ ಹೊಟ್ಟೆ ಗಾಗಿ ಗಂಡಸರೇ ದುಡಿಯುವರು. ಹೆಂಗಸರು ಮಾಡಬೇಕಾದ ಕೆಲಸಗ ಳನ್ನು ಹೇಳು.

ಗಂ—ಹೆಂಗಸರು ಮನೆಯ ಕೆಲಸಗಳನ್ನು ಮಾಡುತ್ತಾರೆ.

ಶಿ—ಹೆಂಗಸರು ಮನೆಯ ಕೆಲಸಗಳನ್ನು ಮಾಡದಿದ್ದರೆ ಹ್ಯಾಗೆ?

ಗಂ—ಹೆಂಗಸರು ಮಾಡದಿದ್ದರೆ ಅಡಿಗೆಯವರನ್ನೂ ಆಳುಗಳನ್ನೂ ಇಟ್ಟುಕೊಳ್ಳಬೇಕಾಗುವದು.

ಶಿ—ಅಡಿಗೆಯವರನ್ನೂ ಆಳುಗಳನ್ನೂ ಇಟ್ಟುಕೊಂಡರೆ ಅವರಿಗೆ ಸಂಬಳ ಕೊಡಬೇಕಾಗುವದು. ಸಂಬಳ ಕೊಡಲಿಕ್ಕಾಗದವರು ಆಳು ಗಳನ್ನು ಇಡಲಾರರು. ಅದೇ ಕೆಲಸವನ್ನು ಹೆಂಗಸರು ಮಾಡಿಕೊಂಡರೆ ಆಳುಗಳಿಗೆ ಕೊಡತಕ್ಕ ಹಣವನ್ನು ಉಳಿಸಿದಂತಾಗುವದು; ಅಂದರೆ ಅವರು ಅಷ್ಟು ಹಣವನ್ನು ಗಳಿಸಿದರೆಂದು ಹೇಳಬಹುದು. ಹೊಲಿಗೆ

ಕಸೂತಿ ಹಾಕೋಣ ಮುಂತಾದ ಕೆಲಸಗಳನ್ನು ಮಾಡಿ ಹೆಂಗಸರು ದುಡ್ಡು ಗಳಿಸಬಹುದು. ಮನೆಯೊಳಗೆ ಚಿಕ್ಕಮಕ್ಕಳಿದ್ದರೆ ಅವರಿಗೆ ಓದುಬರೆಯು ಲಿಕ್ಕೆ ಕಲಿಸಬಹುದು. ಮತ್ತು ಉಪದೇಶಪರವಾದಂಥ ಕಥೆಗಳನ್ನು ಹೇಳಿ ಇಲ್ಲವೆ ಮನೆಗೆಲಸವನ್ನು ಕಲಿಸಿ ಅವರನ್ನು ಪ್ರಪಂಚಕ್ಕೆ ತಕ್ಕವರನ್ನು ಮಾಡಬಹುದು. ಸೋಮಾರಿತನದಿಂದ ಸುಮ್ಮನೆ ಕುಳಿತರೆ ಅನ್ನವು ಪಚನ ವಾಗದೆ ಅವರು ಅಶಕ್ತರೂ ಬೇನೆಕೊಳಕರೂ ಆಗುವರು. ಆದಕಾರಣ ನೀವು ಕೆಲಸಮಾಡುವದು ಅವಶ್ಯವೆಂದು ಮೇಲೇ ಕಾಣುವದು.

ಗಂ—ಅಹುದಮ್ಮಾ, ನಾವು ಕೆಲಸ ಮಾಡಬೇಕೆಂಬದೇ ಸತ್ಯವು.

ಶಿ—ನೀವು ಬರೇ ಕೆಲಸ ಮಾಡಬೇಕಿಷ್ಟೇ ಅಲ್ಲ. ಆ ಕೆಲಸದಲ್ಲಿ ನಿಮ್ಮ ಪ್ರೀತಿಯು ಇರತಕ್ಕದ್ದು. ಈ ಕಾರ್ಯಪ್ರೀತಿಯನ್ನು ಚಿಕ್ಕಂದಿ ನಿಂದ ಬೆಳಿಸಿಕೊಳ್ಳದಿದ್ದರೆ ದೊಡ್ಡವರಾದಾಗ ಈ ಪ್ರೀತಿಯು ಉಳಿಯುವ ದಿಲ್ಲ. ದೊಡ್ಡವರಾದ ಬಳಿಕ ಎಷ್ಟು ಕೆಲಸವನ್ನು ಮಾಡಬೇಕೆಂಬದರ ಬಗ್ಗೆ ನೀವು ವಿಚಾರ ಮಾಡತಕ್ಕದ್ದು. ಪ್ರತಿಯೊಂದು ಕೆಲಸವನ್ನು ಕಲಿಯುವದಕ್ಕಾಗಿ ನೀವು ಕಷ್ಟಬಟ್ಟು ದುಡಿಯಬೇಕು. ಕಲಿಯದೆ ಕೆಲ ಸವು ಬಾರದು. ಅದರಲ್ಲಿ ಪ್ರೀತಿ ಇದ್ದ ಹೊರತು ಅದನ್ನು ಚೆನ್ನಾಗಿ ಮಾಡಲಾರಿರಿ. ಕೆಲವು ಹೆಣ್ಣುಮಕ್ಕಳು, ತಾಯಿಯು ಯಾವದಾವ ರೊಂದು ಕೆಲಸವನ್ನು ಮಾಡಹೇಳಿದರೆ ಬೇಸರಗೊಳ್ಳುವರು. ಆದರೆ ಹೀಗೆ ಬೇಸತ್ತರೆ ಅವರ ಕೈಯಿಂದ ಕೆಲಸ ಹ್ಯಾಗಾಗಬೇಕು? ದನಕರು ಗಳು ಹಗಲೆಲ್ಲ ತಿರುಗುವವು. ಪಕ್ಷಿಗಳು ಇಡೀ ದಿವಸ ಹಾರುವವು. ಇಷ್ಟೇ ಏಕೆ? ಸಣ್ಣ ಸಣ್ಣ ಹುಳುಹುಪ್ಪಡಿಗಳು ಸಹ ಸೋಮಾರಿಯಾಗಿ ಕೂಡ್ರು ವದಿಲ್ಲ. ದೇವರು ಮನುಷ್ಯನನ್ನು ದುಡಿಯುವದಕ್ಕಾಗಿಯೇ ಹುಟ್ಟಿಸಿರು ತ್ತಾನೆ. ನಮ್ಮ ಮುಂದೆ ಎಲೆಯನ್ನು ಬಡಿಸಿದರೂ ನಾವು ಕೈಚಾಚಿ ತುತ್ತು ತೆಗೆದುಕೊಂಡು ಬಾಯಿಯೊಳಗೆ ಹಾಕಿಕೊಳ್ಳದೆ ಹೊಟ್ಟೆ ತುಂಬದು. ಕೆಲಸವು ನಮ್ಮನ್ನು ಸವಿಸುವದಿಲ್ಲ. “ಕೆಲಸ ಮಾಡುವ

ಚಟವು ಎರಡನೆಯವರನ್ನು ಒಲಿಸಿಕೊಳ್ಳುವಂಥ ಮಂತ್ರವಿರುತ್ತದೆ," ಎಂಬ ಮಾತು ಸುಳ್ಳಲ್ಲ.

---

## ೭ನೆಯ ಪಾಠ.

# ಶರದೃತುವಿನ ಗೀತೆ.

ಶರಷಟ್ಪದಿ.

ಶರದೃತುವಿನ ಸುಂ । ದರ ದಿನವಿದು ಬ- ।
ನ್ನಿರಿ! ಬನ್ನಿರಿ! ಪ್ರಿಯ ಕೆಳದಿಯರೇ ॥
ಪರತರ ಜಗದೀ । ಶ್ವರನಂ ಪಾಡುತೆ ।
ನೆರೆ ಮೋದಿಸುವಾ! ಕೆಳದಿಯರೇ ॥ ೧ ॥

ಚಿಕ್ಕಿಗಳೆಷ್ಟೊಂ । ದಕ್ಕರೆ ಕೊಡುವವು ।
ಚೊಕ್ಕ ಕಳೆಯು ಮೇಣ್ ಚಂದ್ರಮನು ॥
ಅಕ್ಕನೆ ನೋಡಾ । ದಿಕ್ಕುಗಳೆಲ್ಲವು ।
ಚಕ್ಕನೆ ಝುಳಝುಳ ತೋರುವವು ॥ ೨ ॥

ಬೆಳತುದು ಮುಗಿಲೊಳು । ಬೆಳದಿಂಗಳು ಕೇಳ್ ।
ಸಲೆ ಹಿಟ್ಟನು ಚಲ್ಲಿದ ಪರಿಯು ॥
ಕುಲುಕುಲು ನಗುವವು । ಸಲೆ ಕುಮುದಾದಿಗ- ।
ಳೆಳಿದು ತಿಳಿದು ಹೊಳೆ ಹರಿಯುವವು ॥ ೩ ॥

ಕಾರ್ತಿಕ ದೀಪಗ । ಳರ್ತಿಯ ನೋಡಾ ।
ಮರ್ತ್ಯಕೆ ಗಡ! ಉಡುರಾಜಿಗಳು ॥
ಆರ್ತಿಯೊಳಾದಿಯ । ಕರ್ತನ ಸೇವೆಗೆ ।
ಸಾರ್ತಂದಂತಿರೆ ಮಿನುಗುವವು ॥ ೪ ॥

ಬೆಳೆಗಳ ಪಣ್ದೆನೆ। ಗಳ ಸೊಬಗಿಂ ಧರೆ।
ಬಳಿದವೊಲೆಸೆಹುದೆರಿಷಣವನ್ನು ॥
ಇಳೆಗತಿದಯದಿಂ। ಕಳುಪಿದನಾ ಋತು-।
ಗಳನಾ ಗುರು ಗೌರೀಶ್ವರನು ॥ ೫ ॥

---

**೮ನೆಯ ಪಾಠ.**

## ವಸ್ತ್ರದ ಆಶೆಯು.

ಸುಂದರಿಯು ಅತ್ತೆಯ ಮನೆಗೆ ಬಂದಾಗ ಇನ್ನೂ ಚಿಕ್ಕವಳಿದ್ದಳು. ಇವಳು ಚಿಕ್ಕಂದಿನಲ್ಲಿ ತವರಮನೆಯೊಳಗೆ ಹಗಲೆಲ್ಲ ಆಟದಲ್ಲಿಯೇ ಹೊತ್ತುಗಳೆಯುತ್ತಿದ್ದಳು. ಈಕೆಗೆ ವಸ್ತ್ರದ ಮೇಲೆ ಆಶೆ ಬಹಳ. ಒಮ್ಮೆ ಅವಳ ಅಜ್ಜನು (ಮಾವನ ತಂದೆಯು) ಸ್ನಾನಮಾಡಿ ಕುಳಿತುಕೊಂಡು ಸುಂದರಿಗೆ ಸಾಣೆಯಕಲ್ಲು ತರಹೇಳಿದನು. ಅದಕ್ಕೆ ಸುಂದರಿಯು— ಅಜ್ಜನೇ, ಅದನ್ನು ನಾನು ಎತ್ತಲಾರೆನೆಂದು ಉತ್ತರ ಕೊಟ್ಟಳು. ಆಗ ಅಜ್ಜನು ತಾನೇ ಎದ್ದು ಸಾಣೆಯಕಲ್ಲು ತೆಗೆದುಕೊಂಡು ಬಂದನು.

ಇದಾದ ಬಳಿಕ ಕೆಲದಿವಸಗಳ ಮೇಲೆ ಆ ಮುದುಕನು ಸಾಣೆಯ ಕಲ್ಲನ್ನು ಅಕ್ಕಸಾಲಿಗನ ಮನೆಗೆ ಒಯ್ದು ಅದಕ್ಕೆಲ್ಲಾ ಬೆಳ್ಳಿಯ ಮಡಾಸ ವನ್ನು ಹಾಕಿಸಿ ದಂಡೆಗುಂಟ ಗೆಜ್ಜೆಯನ್ನು ಹಚ್ಚಿಸಿ, ಕೊರಳೊಳಗೆ ಹಾಕಿ ಕೊಳ್ಳುವದಕ್ಕೆ ಸರಪಳಿಯನ್ನು ಹಚ್ಚಿಸಿ ಒಂದು ವಸ್ತ್ರದಲ್ಲಿ ಕಟ್ಟಿಕೊಂಡು ಮನೆಗೆ ತಂದು ಸುಂದರಿಯನ್ನು ಕರೆದು—ಮುದ್ದು ಮಗುವೇ, ನಾನು ನಿನಗೊಂದು ಬೆಲೆಯುಳ್ಳ ವಸ್ತವನ್ನು ಮಾಡಿಸಿ ತಂದಿದ್ದೇನೆ, ಎಂದು ಅರಿ ವೆಯ ಗಂಟನ್ನು ಬಿಚ್ಚಿ ಅದನ್ನು ಮುಂದಿಟ್ಟು, ಇದು ನಿನಗೆ ಬೇಕೋ? ಎಂದು ಕೇಳಿದನು. ಕಣ್ಣು ಕುಕ್ಕಿಸುವ ಆ ಒಡವೆಯನ್ನು ನೋಡಿ ಅವಳು ಹಿರಿ ಹಿರಿ ಹಿಗ್ಗಿದಳು. ಸುತ್ತು ದಂಡೆಗುಂಟ ಹಚ್ಚಿದ ಗೆಜ್ಜೆಗಳು ಗಿಲಗುಡುವದನ್ನು ಕೇಳಿ ಆನಂದಬಟ್ಟಳು. ಅದನ್ನು ಭರ್ರನೇ ತಕ್ಕೊಂಡು

ಕೊರಳಲ್ಲಿ ಹಾಕಿಕೊಂಡಳು. ಅದು ಅವಳಿಗೆ ಜಡವೆನಿಸಿತು. ಆದರೂ ಅಜ್ಜನು ತನಗೋಸ್ಕರ ಇಂಥ ದೊಡ್ಡದೂ ಬಹಳೇ ಬೆಲೆಯುಳ್ಳದ್ದೂ ಆದ ವಸ್ತ್ರವನ್ನು ತಂದು ಕೊಟ್ಟಿದ್ದಾನೆಂಬ ಉಬ್ಬಿನಿಂದ ಅದರ ಭಾರ ದಿಂದಾಗುವ ನೋವನ್ನು ಲೆಕ್ಕಿಸದೆ ಹಗಲೂ ಇರುಳೂ ಕೊರಳಲ್ಲಿಯೇ ಧರಿ ಸುತ್ತಿದ್ದಳು.

ಒಮ್ಮೆ ಸುಂದರಿಯು ಬೀಸುತ್ತ ಕೂತಿದ್ದಳು. ಬೀಸುವಾಗ ಮೈಯು ಹೊಯ್ದಾಡಲು ಕಲ್ಲು ಎದೆಗೆ ದಪ್‌ದಪ್ ಬಡಿಯಹತ್ತಿತು. ಆದರೂ ಅವಳು ಅದನ್ನೇನೂ ತೆಗೆವಿಡಲಿಲ್ಲ. ಅದೇ ವೇಳೆಗೆ ಹೊರಗಿ ನಿಂದ ಅಜ್ಜನೂ ಬಂದನು. ಅವನು ಕಲ್ಲಿನ ದಪ್‌ದಪ್ ಎಂಬ ಸಪ್ಪ ಳವನ್ನು ಕೇಳಿ—ತಂಗೀ, ಅದನ್ನು ತೆಗೆದಿಡು ಎಂದನು. ಅದಕ್ಕೆ ಅವಳು— ಅಜ್ಜನೇ, ಇದರ ಮೇಲೆ ನನ್ನ ಪ್ರೀತಿ ಬಹಳ ಎನ್ನಲು, ಅಜ್ಜನು—ಆದೀತು; ಆದರೆ ಎದೆಗೆ ಬಡಿಯುವ ಅದರ ಹೊಡೆತದಿಂದ ಕ್ಷಯರೋಗವು ಉತ್ಪ ನ್ನವಾಗುವದು ಎಂದು ಆ ವಸ್ತ್ರವನ್ನು ಬಹಳೇ ಆಗ್ರಹ ಮಾಡಿ ತೆಗೆದಿಡಿ ಸಿದನು. ಆ ಮೇಲೆ ಸಾಣೆಯಕಲ್ಲನ್ನು ಕೈಯಲ್ಲಿ ತಕ್ಕೊಂಡು ಒಂದು ಕಡೆಯ ಆ ಬೆಳ್ಳಿಯ ಮುಡಾಸವನ್ನು ತೆಗೆದನು. ಅದರಿಂದ ಒಳಗಿನ ಕಲ್ಲು ಕಾಣಹತ್ತಿತು. ಆ ಮೇಲೆ ಅದನ್ನು ಸುಂದರಿಗೆ ತೋರಿಸಿ—ಮುದ್ದು ಮಗಳೇ, ಇದೇ ಸಾಣೆಯಕಲ್ಲನ್ನು ಎತ್ತಲಾರೆನೆಂದು ಹೇಳಿದ್ದೆಯಲ್ಲವೇ! ಆದರೆ ಅದಕ್ಕೆ ಬೆಳ್ಳಿಯ ತಗಡನ್ನು ಹೊದಿಸಲು ಅದೇ ಒಂದು ಆಭರಣ ವಾಯಿತು. ಇಂಥ ಜಡವಾದ ಕಲ್ಲನ್ನು ಹಗಲಿರುಳು ಕೊರಳಲ್ಲಿ ಕಟ್ಟಿ ಕೊಂಡು ಹೇಗೆ ತಿರುಗುತ್ತೀ? ಎಂದನು.

ಆ ಕಲ್ಲನ್ನು ನೋಡಿ ಸುಂದರಿಗೆ ನಾಚಿಕೆ ಬಂತು; ಲಜ್ಜೆಯಿಂದ ಮುಖ ತಗ್ಗಿದವಳಾಗಿ ಏನೂ ಮಾತಾಡಲಿಲ್ಲ.

ಆ ಮೇಲೆ ಮುದುಕನು—ಹೆಂಗಸರಿಗೆ ವಸ್ತ್ರದ ಆಶೆ ಬಹಳ. ಕಾಲ ಬೆರಳುಗಳ ಬೆಳವಣಿಗೆಗೆ ಅಡ್ಡಿಯಾದರೂ ಚಿಂತೆ ಇಲ್ಲ; ನಡೆಯಲಿಕ್ಕೆ ತ್ರಾಸ

ವಾದರೂ ಅಡ್ಡಿ ಇಲ್ಲ; ಕಾಲುಂಗುರ ಮುಂತಾದ ಆಭರಣಗಳನ್ನು ಹಾಕೇ ಹಾಕಿಕೊಳ್ಳುವರು. ಕೆಲವರು ಹತ್ತು ಹನ್ನೆರಡು ಸೇರಿನ ಸರಪಳಿಯನ್ನು ಹಾಕಿಕೊಳ್ಳುವದಲ್ಲದೆ ಅದರ ಮೇಲೆ ಕಾಲಕಡಗವನ್ನೂ ಇಟ್ಟುಕೊಳ್ಳ ಬೇಕೆನ್ನುತ್ತಾರೆ. ಒಮ್ಮೊಮ್ಮೆ ಅವು ಸೆರೆಯಾಳುಗಳ ಬೇಡಿಗಳಿಗಿಂತ ಜಡ ವಾಗಿದ್ದರೂ ಅವು ಆಭರಣಗಳೆಂದೆನ್ನಿಸಿಕೊಳ್ಳುವ ಮೂಲಕ, ಅವುಗ ಳನ್ನು ಇಟ್ಟುಕೊಳ್ಳಲಿಕ್ಕೆ ಹೆಂಗಸರಿಗೆ ಬಲು ಸಂತೋಷವೆನಿಸುತ್ತದೆ. ಹೆಂಗಸರು ತಮ್ಮ ಕಿವಿಗಳಲ್ಲಿ ನಾಲ್ಕು ಐದು ತೂತುಗಳನ್ನು ತೆಗಿಸಿ ಕೊಂಡು ಅಲ್ಲಿ ಅನೇಕ ತರದ ಆಭರಣಗಳನ್ನು ಇಟ್ಟುಕೊಳ್ಳುವರು. ಮೂಗಿನಲ್ಲಿ ಕೂಡ ಬೇರೆ ಬೇರೆ ಆಭರಣಗಳನ್ನು ಇಡುವರು. ಕೊರಳಲ್ಲಿ ಮುತ್ತು ರತ್ನ ಬಂಗಾರಗಳ ಸರಗಳನ್ನು ಧರಿಸುವರು. ಮುಂಗೈಯಲ್ಲಿಯೂ ಮೊಳಕೈ ಮೇಲೆಯೂ ಬೇರೆ ಬೇರೆ ಹೆಸರಿನ ಆಭರಣಗಳನ್ನು ಇಡುವರು. ತಲೆಯೊಳಗೆ ಸಹ ಅನೇಕ ತರದ ವಸ್ತ್ರಗಳನ್ನು ಹಾಕಿಕೊಳ್ಳುವರು. ಇಡೀ ಮೈಯೆಲ್ಲ ವಸ್ತ್ರಗಳಿಂದ ಮುಚ್ಚಿ ಹೋಗಿದ್ದರೂ ಇನ್ನೂ ಹೆಚ್ಚಿಗೆ ಆಭರ ಣವನ್ನು ಹಾಕಿಕೊಳ್ಳಲಿಕ್ಕೆ ಒಲ್ಲೆನೆನ್ನರು. ಇಷ್ಟು ಜಡವಾದ ಅನೇಕ ಆಭರಣಗಳನ್ನಿಟ್ಟುಕೊಳ್ಳಲಿಕ್ಕೆ ಅವರಿಗೆ ಬೇಸರ ಬರುವದಿಲ್ಲವೆಂಬ ಮಾತು ಆಶ್ಚರ್ಯಕರವಾದದ್ದೇ ಸರಿ; ಆದರೆ ಕೆಲವು ಹಗುರಾದ ಆಭರಣಗಳು ಶರೀರವನ್ನು ಅಂದಗೊಳಿಸುತ್ತವೆ; ತೊಂದರೆಯನ್ನೂ ಕೊಡುವದಿಲ್ಲವೆಂದು ನುಡಿದನು.

ಸು—ಅಜ್ಜಾ, ನೀವು ಅನ್ನುವದು ನಿಜವು. ಇಂದಿನಿಂದ ನಾನು ಹೆಚ್ಚು ಆಭರಣಗಳನ್ನು ಎಂದೂ ಬೇಡುವದಿಲ್ಲ.

---

೯ನೆಯ ಪಾಠ.

## ವಸ್ತ್ರಗಳೂ ಅವುಗಳನ್ನಿಟ್ಟುಕೊಂಡು ತಿರುಗುವ ಹುಡುಗೆಯೂ.

ಅಕ್ಕನವರು— ಮುದ್ದು ಮಕ್ಕಳೇ, ಇಂದು ನಿಮಗೊಂದು ಕೆಟ್ಟ ಸುದ್ದಿಯನ್ನು ಹೇಳಲಿಕ್ಕೆ ನನಗೆ ಬಹಳ ದುಃಖವಾಗುತ್ತದೆ. ಮೂರನೆಯ ಇಯತ್ತೆಯನ್ನು ಕಲಿಯುತ್ತಿತ್ತಲ್ಲ, ಆ ಯಮುನೆಯೆಂಬ ಹುಡುಗೆ, ನಿಮಗೆ ಗೊತ್ತಿಲ್ಲವೆ?

ಅಂಬೆ— ಹೌದು, ಹೌದು, ನಾನು ಆಕೆಯನ್ನು ಪೂರಾ ಬಲ್ಲೆನು. ಈಗ ಎರಡು ದಿವಸದಿಂದ ಆಕೆಯು ಎಲ್ಲಿಯೋ ತಪ್ಪಿಸಿಕೊಂಡಿದ್ದಾಳೆಂದು ಅಪ್ಪನು ಹೇಳಿದನು.

ಮಹಾಲಕ್ಷ್ಮಿ— ಮೊನ್ನೆ ಆ ಹುಡುಗೆ ಸಾಲೆಯಿಂದ ಹೋದವಳು ರಾತ್ರಿಯಾದರೂ ತಿರುಗಿ ಮನೆಗೆ ಬಂದೇ ಇಲ್ಲಂತೆ. ಅದರಿಂದ ಮನೆಯ ವರು ಗಾಬರಿಯಾಗಿ ಆಕೆ ಹೋಗುತ್ತಿದ್ದ ಎಲ್ಲ ಸ್ಥಳಗಳನ್ನು ಹುಡುಕಿದರೂ ಗೊತ್ತಾಗಲಿಲ್ಲ. ನಿನ್ನೆಯೂ ಹುಡುಕಿದರು; ಆದರೂ ನಿರರ್ಥಕವೇ ಆಯಿತು. ಇಂದು ಬೆಳಿಗ್ಗೆ ಬಾವಿಯಲ್ಲಿ ಯಮುನೆಯ ಹೆಣವು ತೇಲು ತ್ತಿದ್ದದ್ದು ಗೊತ್ತಾಯಿತು. ಇದನ್ನು ಕೇಳಿದ ಕೂಡಲೆ ಎಲ್ಲ ಹುಡುಗಿ ಯರ ಕಣ್ಣುಗಳಲ್ಲಿ ನೀರು ತುಂಬಿದವು. ಯಮುನೆಯು ಶಾಂತಳೂ ಬುದ್ಧಿ ವಂತಳೂ ಇದ್ದದರಿಂದ ಎಲ್ಲರಿಗೂ ಬೇಕಾಗಿದ್ದಳು.

ಅಂಬೆ— ಅವ್ವಾ! ಅವಳು ಬಾವಿಯಲ್ಲಿ ಹ್ಯಾಗೆ ಬಿದ್ದಳು?

ಮ— ಸಾಲೆ ಬಿಟ್ಟ ಕೂಡಲೇ ಯಾರೋ ಒಬ್ಬರು ಆಕೆಯನ್ನು ಮೋಸದಿಂದ ಕರಕೊಂಡು ಹೋಗಿ ಒಂದು ಮನೆಯಲ್ಲಿ ಮುಚ್ಚಿ ಇಟ್ಟ ರಂತೆ. ಬಳಿಕ ಬಾಯಲ್ಲಿ ಚಂಡು ತುರುಕಿ ಮೈಮೇಲಿನ ವಸ್ತ್ರಗಳನ್ನೆಲ್ಲಾ ಬಿಚ್ಚಿಕೊಂಡು ಸರಿರಾತ್ರಿಯಲ್ಲಿ ಸದ್ದಡಗಿದಾಗ ಆಕೆಯನ್ನು ಹೊತ್ತು

ಕೊಂಡು ಹೋಗಿ ಊರ ಹೊರಗಿನ ಆ ದೊಡ್ಡ ಬಾವಿಯಲ್ಲಿ ಒಗೆದರಂತೆ. ಆಕೆಗೆ ವಸ್ತ್ರದ ಸೋಸು ಬಹಳ ಎಂಬದು ನಿನಗೆ ಗೊತ್ತಿಲ್ಲವೆ?

ಸುಂದರಿ—ಹೌದವ್ವಾ, ಆಕೆಯು ದಿನಾಲು ಬಹಳ ವಸ್ತ್ರಗಳನ್ನಿಟ್ಟು ಕೊಂಡು ಸಾಲೆಗೆ ಬರುತ್ತಿದ್ದಳು.

ಮ— ಅವೇ ವಸ್ತ್ರಗಳೇ ಅವಳ ಜೀವಕ್ಕೆ ಮುಳುವಾದವು. ಶಾಂತಾ, ನೀನು ದಿನಕ್ಕಿಂತ ಇಂದೇಕೆ ಹೆಚ್ಚು ವಸ್ತ್ರಗಳನ್ನಿಟ್ಟುಕೊಂಡಿರುವೆ?

ಶಾಂತೆ— ನಮ್ಮ ಮಾವನ ಮನೆಯಲ್ಲಿ ಮದುವೆ. ದಿನಾಲು ನಾನೇ ಬೀಗರ ಮನೆಗೆ ಊಟಕ್ಕೆ ಕರೆಯಲಿಕ್ಕೆ ಹೋಗಬೇಕಾಗುತ್ತದೆ. ಇಂದು ಊಟ ತಡವಾಯಿತು; ಆದ್ದರಿಂದ ಹಾಗೇ ನೆಟ್ಟಗೆ ಸಾಲೆಗೆ ಬಂದೆನು.

ಮ—ಯಮುನೆಯ ಗತಿ ಏನಾಯಿತೆಂಬದನ್ನು ನೋಡು; ನಿನ್ನ ಕಣ್ಣ ಮುಂದದೆ. ಮೈತುಂಬ ವಸ್ತ್ರಗಳನ್ನಿಟ್ಟುಕೊಂಡು ಹೊರಗೆ ಹೋಗು ವದು ಹಿತವಲ್ಲ. ನಿಮ್ಮ ಮಾವನ ಮನೆಯಲ್ಲಿ ಮದುವೆಯಾದರೆ ನೀನೇಕೆ ಇಷ್ಟು ಸಿಂಗಾರವಾಗಬೇಕು?

ಶಾ—ಅಕ್ಕನವರೇ, ಇಂಥ ಶುಭದಿವಸಗಳಲ್ಲಿ ವಸ್ತ್ರಗಳನ್ನಿಟ್ಟುಕೊಳ್ಳ ದಿದ್ದರೆ ಇನ್ನು ಎಂದು ಇಟ್ಟುಕೊಳ್ಳಬೇಕು?

ಮ—ಶುಭಕಾರ್ಯಗಳಲ್ಲಿ ವಸ್ತ್ರಗಳನ್ನಿಟ್ಟುಕೊಳ್ಳುವದರಿಂದ ಲಾಭ ವೇನು?

ಶಾ—ಲಾಭವಿಲ್ಲೆಂಬದು ನಿಜವು; ಅವುಗಳನ್ನಿಟ್ಟುಕೊಂಡರೆ ಶರೀರಕ್ಕೆ ಭೂಷಣವಾಗುವದು; ನೆರೆದವರು ನಾಲ್ಕು ಮಂದಿ ಮನ್ನಿಸುವರು.

ಮ—ಚಂದಕ್ಕಾಗಿಯೂ ಮಂದಿಯ ಹೊಗಳಿಕೆಗಾಗಿಯೂ ಅಷ್ಟು ಆಭರಣಗಳನ್ನಿಟ್ಟುಕೊಳ್ಳಬೇಕಾಗುವದೇನು?

ಶಾ—ಅದಕ್ಕೇನು ಅಳತೆಯಿಲ್ಲ. ವಸ್ತ್ರಗಳು ಬೆಲೆಯುಳ್ಳವೂ ಹೆಚ್ಚೂ ಇದ್ದಷ್ಟು ಮನಸ್ಸಿಗೆ ಹರ್ಷವಾಗುವದು.

ಮು—ನಿಮ್ಮ ಶರೀರವನ್ನೆಲ್ಲ ವಸ್ತ್ರದಿಂದ ಮುಚ್ಚಿದರೆ ನಿಮಗೆ ಹೆಚ್ಚು ಸುಖವೆನಿಸುವದೊ?

ಶಾ—ಇಡೀ ದೇಹವನ್ನು ವಸ್ತ್ರದಿಂದ ಮುಚ್ಚುವದೆಂತು?

ಮು—ಕೆಲವು ಆಭರಣಗಳು ಚೆಂದ ಕಾಣುವದಿಲ್ಲ. ಜನರು ಅವನ್ನು ಅವಶ್ಯವಾಗಿ ಧರಿಸಬೇಕೆಂದು ಹಾಕಿಕೊಳ್ಳುವರು. ಬಹಳ ವಸ್ತ್ರಗಳನ್ನು ಹಾಕಿಕೊಂಡವರನ್ನು ಜನರು ಹೊಗಳುವರು. ಕಾಡು ಜನರು ಮೈಗೆ ಬಣ್ಣ ಬಡಿದುಕೊಳ್ಳುವದೂ, ಎಲೆಗರಿಗಳನ್ನು ಇಟ್ಟುಕೊಳ್ಳುವದೂ ಚೆಂದವೆಂದು ತಿಳಿಯುವರು. ಕೀಳ ಜಾತಿಯವರು ಅಂದರೆ ಸಿಕ್ಕಲಿಗರು, ಒಡ್ಡರು, ಲಂಬಾಣಿಯರು ಮುಂತಾದವರು ಹಿತ್ತಾಳಿಯ ಬಳೆಗಳನ್ನು ಕೈತುಂಬಾ ಇಟ್ಟು ಕೊಳ್ಳುವರು. ಕೆಲವರು ಕರಿಮಣಿ, ಹವಳ, ಕವಡಿ ಮುಂತಾದವುಗಳ ಸರಗಳನ್ನು ಹಾಕಿಕೊಳ್ಳುವರು. ಈ ಆಭರಣಗಳು ಚೆಂದ ಕಾಣುವವೊ?

ಶಾ—ಇಲ್ಲ, ಅಸಡ್ಡಾಳ ಕಾಣುವವು.

ಮು—ನೀನು ಮಾತ್ರ ಅವು ಅಸಡ್ಡಾಳ ಕಾಣುವವೆಂದು ಅನ್ನುತ್ತೀ. ಆದರೆ ಅವರು ಅವುಗಳನ್ನು ಚೆಂದ ಕಾಣುವವೆಂತಲೇ ಇಟ್ಟುಕೊಳ್ಳುವರು. ಹಳ್ಳಿಗಾಡ ಜನರು ಕಗ್ಗ ಬಳೆಗಳನ್ನೂ ಗುದ್ದಿಯಂಥ ಕರಿಮಣಿ ಸರಗಳನ್ನೂ ಹಾಕಿಕೊಳ್ಳುವದು ಚೆಂದವೆಂದು ತಿಳಿಯುವರು. ಆದರೆ ನಾಗರಿಕರು ಈ ರೀತಿಯನ್ನು ಜರೆಯುವರು. ಅರಿವೆಗಳಂತೆ ಆಭರಣಗಳು ಅವಶ್ಯವಾದವುಗಳಲ್ಲ. ಚೆಂದಕ್ಕಾಗಿ ಆಭರಣಗಳನ್ನು ಇಟ್ಟುಕೊಳ್ಳಬೇಕು. ಆದರೆ ಅವು ಹಗುರೂ ಮಾಟಾದವೂ ಇದ್ದಷ್ಟು ನೆಟ್ಟಗೆ.

---

## ೧೧ನೆಯ ಪಾಠ.

## ಶ್ರೀರಾಮನೂ ಶಬರಿಯೂ.

ಬಂದ ರಾಮನ ವಂದಿಸುತಲಾ- ।
ನಂದದಿಂ ಸತ್ಕರಿಸಿ ಶಬರಿಯು ।

ಚಂದದಿಂದನುಗೊಳಿಸಿ ತಂದಿಹ ಬದರಿಫಲಗಳನು ||
ಮುಂದಿರಿಸಿ ಸ್ವೀಕರಿಸು ದೇವನೆ |
ಇಂದು ನಾಂ ಸಲೆ ಧನ್ಯಳಾದೆನು |
ಎಂದೆನುತ ಕೈಮುಗಿದು ನಿಂದಳು ರಾಮನಿದಿರಿನಲಿ ||೧||

ಎಂದು ಪೇಳಿದ ಭಕ್ತಿವಚನವ- |
ನಂದು ರಘುಪತಿ ಕೇಳಿ ತಾನಾ- |
ನಂದದಿಂ ಕೈಕೊಂಡು ನುಡಿದನು ಶಬರಕನ್ನಿಕೆಗೆ ||
ಅಂದವಾದೀ ಫಲಗಳೆಡೆಯಲಿ |
ಸಂದ ಗಾಯಗಳೇನು ಪಕ್ಷಿಯು |
ತಿಂದ ಗುರುತೋ ಅಲ್ಲದೊಡೆ ನಿನ್ನುಗುರ ಗುರುತುಗಳೋ ||೨||

ಎನಲು ಕೇಳ್ದಾ ಶಬರಿ ನುಡಿದಳು |
ವನದ ಪಕ್ಷಿಯು ತಿಂದುದೀವನೆ |
ನಿನಗೆ ನಾಂ ರುಚಿ ನೋಡೆ ಕಡಿದೆನು ಸ್ವಚ್ಛ ದಂತಗಳಿಂ ||
ವನದೊಳಗೆ ಸವಿಯಾದ ಫಲಗಳ |
ನೆನುಗೊಳಿಸೆ ಕಡಿದಿರುವೆನಲ್ಲದೆ |
ಘನಮಹಿಮ ಬೇರಿಲ್ಲ ಕಾರಣವಿದಕೆ ಸ್ವೀಕರಿಸೈ ||೩||

ಬಾಲೆಶಬರಿಯ ಸರಳವಚನವ |
ಲಾಲಿಸುತ ಶ್ರೀರಾಮಚಂದ್ರನು |
ಲೀಲೆಯಿಂ ಭಕ್ಷಿಸುತಲವುಗಳ ನುಡಿದನೊಲವಿಂದ ||
ಲಾಲಿಸೌ ಸತಿ ನಿನ್ನ ಭಕ್ತಿಗೆ |
ಸಾಲದಾನೊಲಿದೀವ ವರವಿದು |
ಪಾಲಿಸಿದೆ ನಿನಗೀಗ ಸ್ವರ್ಗವನೆನುತ ತೆರಳಿದನು ||೪||

ನೆಲಸಿದುರುಭಕ್ತಿಯಲಿ ಭಕ್ತಳು ।
ನಲಿದು ಕೊಟ್ಟಾಹಾರವದು ಎಂ- ।
ಜಲವೆನಿಪುದೇ ಕೀಳೆನಿಪುದೇ ಭಕ್ತವತ್ಸಲಗೆ ॥
ಫಲವನೀಯುತೆ ಶಬರಕನ್ಯೆಯು ।
ಫಲವ ಪಡೆದಳು ಸ್ವರ್ಗಭೋಗದ ।
ಫಲವು ಕಾರಣವಲ್ಲವದಕಾ ಭಕ್ತಿ ಕಾರಣವು ॥ ೫ ॥

---

## ೧೧ನೆಯ ಪಾಠ.

## ತಪ್ಪು ಎಣಿಸೋಣ.

ಒಂದು ದಿವಸ ಮರಿಯಾಮನು—ಆಹಾ! ಆ ಮಹತಾಬಳು ಎಂಥ ದೈವಶಾಲಿಯು! ಎಲ್ಲ ಬಗೆಯಿಂದ ಸುಖದಲ್ಲಿದ್ದಾಳೆ ಎಂದು ಫಾತುಮೆಯ ಮುಂದೆ ಅಂದಳು.

ಫಾ—ನೀನು ಆಕೆ ದೈವಶಾಲಿಯೆಂದು ಯಾಕೆ ಅನ್ನುತ್ತೀ? ಆಕೆ ನಿಜವಾಗಿ ದೈವಶಾಲಿಯಾಗಿದ್ದರೆ, ಇದ್ದ ಒಬ್ಬ ತಮ್ಮನನ್ನು ಕಳಕೊಳ್ಳು ತ್ತಿದ್ದಿಲ್ಲ. ಅತ್ತೆಮನೆಯಲ್ಲಿ ಕಾಲಿಟ್ಟ ಕೂಡಲೆ ಅತ್ತೆಯನ್ನು ನುಂಗಿ ಹಿಡಿದಳು. ಈ ಕರಿಗಾಲವ್ವ ಹೊಕ್ಕಲ್ಲೆಲ್ಲ ಅರಿಷ್ಟವನ್ನು ತರುವಳು.

ಮ—ಅವಳ ತಮ್ಮನಿಗೂ ಅತ್ತೆಗೂ ಆಕೆಯಿಂದ ಹ್ಯಾಗೆ ಸಾವು ಬಂತು? ಜನನಮರಣಗಳು ದೇವರ ಕೈಯೊಳಗಿನವು. ಒಬ್ಬರ ಕಾಲ ಗುಣವು ಕೆಟ್ಟದ್ದೆಂಬದು ತೀರ ಮೂಢತನವು. ಅವಳು ಅತ್ತೆಯ ಮನೆಗೆ ಹೋದ ಬಳಿಕ ಅವಳ ಗಂಡನಿಗೆ ಸಂಬಳ ಹೆಚ್ಚಾಯಿತು, ಇಬ್ಬರು ಗಂಡು ಮಕ್ಕಳನ್ನು ಹಡೆದಳು. ಅವರು ಶ್ರೀಮಂತರಾದರು.

ಫಾ—ಗಂಡನ ಸಂಬಳವನ್ನೂ ಈಕೆಯು ಬೆಳಿಸಿದಳೇನು? ಪಾಪ, ಆತನು ಊರ ಬಿಟ್ಟು ದೂರ ದೇಶಕ್ಕೆ ಮಾತ್ರ ಹೋಗಬೇಕಾಯಿತು, ಸಂಬಳವಾದರೂ ಬಹಳ ಬೆಳೆಯಿತೇ? ಬರೇ ಐದು ರೂಪಾಯಿ,

ಅದೇನು ಹೆಚ್ಚಲ್ಲ. ಮಕ್ಕಳನ್ನು ಹಡೆದದ್ದೇನು, ಅಂಥ ಹೊಗಳತಕ್ಕ ಮಾತಲ್ಲ. ಆ ಮಕ್ಕಳು ದೊಡ್ಡವರಾಗಿ ಚೆನ್ನಾಗಿ ಕಲಿತು ಒಳ್ಳೆಯವ ರೆನಿಸಿಕೊಂಡರೆ ಮಾತ್ರ ಅವರಿಗೆ ಆನಂದವಷ್ಟೆ. ಅವಳ ತಂದೆಗೆ ಗಂಡು ಮಕ್ಕಳಿದ್ದಿಲ್ಲವಾದ್ದರಿಂದ ಆಕೆಗೆ ಸಂಪತ್ತು ಬಂತು. ಇದರೊಳಗೇನು ಆಕೆಯ ಸುದೈವದಾಟವು?

ಮ—ಗೆಳತಿಯೇ, ಯಾವಾಗಲು ಮುಂದಿಯ ತಪ್ಪೆಣಿಸುವದೇ ನಿನ್ನ ಸ್ವಭಾವವೆಂದು ನನಗೆ ಕಾಣುವದು. ಕೆಲಸವನ್ನು ಕೈಕೊಂಡವನು ಮನೆ ಬಿಟ್ಟು ದೂರಹೋಗಬೇಕಾಗುವದು. ಈ ಕಾಲದಲ್ಲಿ ತಿಂಗ ಳೊಂದಕ್ಕೆ ಐದು ರೂಪಾಯಿ ಹೆಚ್ಚು ಸಿಗುವದು ಸಣ್ಣ ಮಾತಲ್ಲ. ಎಷ್ಟೋ ಜನರು ಹೊಟ್ಟೆಗಾಗಿ ಸಿಪಾಯಿ ಹವಾಲದಾರರಾಗಿ ಮೈಮುರಿದು ದುಡಿಯಬೇಕಾಗುವದು. ಇಷ್ಟಾದರೂ ಇವರಿಗೆ ಎಂಟು ಹತ್ತು ರೂಪಾ ಯಿಗಿಂತ ಹೆಚ್ಚು ಸಂಬಳವಿರುವದಿಲ್ಲ. ಮಹತಾಬಳ ಗಂಡನಿಗೆ ಮೂವತ್ತು ರೂಪಾಯಿ ಸಂಬಳದ ಕಾರಕೂನನ ಕೆಲಸವು ದೊರೆತಿರುವದು; ಇದು ಮಾನದ ಕೆಲಸವಲ್ಲವೇ? ಅವಳ ಮಕ್ಕಳಾದರೂ ಎಷ್ಟು ಚೆಲುವರೂ ಜಾಣರೂ ಇದ್ದಾರೆ. ಅವರನ್ನು ಕಂಡರೆ ನನಗೆ ಬಹಳ ಸಂತೋಷವಾ ಗುವದು. ಅವರು ದಿನಾಲು ಸಾಲೆಗೆ ಬರುತ್ತಾರೆ. ಚೆನ್ನಾಗಿ ಕಲಿಯು ತ್ತಾರೆ. ಅವಳ ತಂದೆಗೆ ಗಂಡುಮಕ್ಕಳಿಲ್ಲದ ಮೇಲೆ ಆ ಆಸ್ತಿಯು ಅವಳಿಗೆ ಬರುವದು ಸಹಜವು.

ಫಾ—ಓಹೋ, ಆಕೆಯ ಗುಣಗಳನ್ನು ಹೊಗಳುತ್ತ ನೀವು ಬೇಕಾ ದಷ್ಟು ಡಂಗುರ ಸಾರಿರಿ. ಆಕೆಯ ಒಬ್ಬ ಮಗನ ಮೂಗು ಕಾಗೆಯ ಮೂಗಾಗಿದೆ; ಇನ್ನೊಬ್ಬ ಹುಡುಗನು ಬೆಕ್ಕುಗಣ್ಣಿನವನು.

ಮ—ನನಗೇನು ಆಕೆಯ ಗುಣಗಳನ್ನು ಸಾರಬೇಕಾಗಿಲ್ಲ. ಸತ್ಯ ವಿದ್ದದ್ದನ್ನು ನುಡಿಯುವೆನು. ತುಸು ಉದ್ದ ಮೂಗು ಇದ್ದವನು ಅಂದ ಗೇಡಿ ಏನು? ಅವನ ಮೂಗು ತುಸು ಉದ್ದವಿರುವದು ನಿಜವು. ಆದರೆ

ಅದು ತುದಿಯಲ್ಲಿ ಬಾಗಿರುವದರಿಂದ ಗಿಳಿಯ ಮೂಗಿನಂತೆ ಚಂದ ಕಾಣು ವದು. ನೀನು ಅವನನ್ನು ನಿನ್ನ ಮಕ್ಕಳಿಗೆ ಹೋಲಿಸಿ ನೋಡು. ಅಂದರೆ ಅವನು ಚೆಲುವನಿರುವನೆಂದು ನೀನು ಒಪ್ಪಿಕೊಳ್ಳಬೇಕಾಗುವದು. ಕೆಂಪು ಇರುವವರು ಒಮ್ಮೊಮ್ಮೆ ಬೆಕ್ಕುಗಣ್ಣಿನವರು ಇರುತ್ತಾರೆ. ಆದರೆ ಅವರು ಚೆಂದ ಕಾಣುವದಿಲ್ಲೆಂಬದು ಎಲ್ಲಿಯ ಮಾತು?

ಫಾ—ಆಕೆಯ ಮಕ್ಕಳು ಕೆಂಪವು, ನನ್ನವು ಕರಿಯವು, ಇದು ನಿಜವು. ಆಕಳು ಕಪ್ಪಾದರೆ ಹಾಲು ಕಪ್ಪೇ? ನನ್ನ ಮಕ್ಕಳು ಕಪ್ಪಾದ ರೇನಾಯಿತು? ಅವನು ನನ್ನ ಮಗನು. ಅವನ ಕಣ್ಣುಗಳು ನೀಲಮಣಿ ಯಂತೆ ಹೊಳೆಯುತ್ತಿವೆ ನೋಡಿರಿ. ಬೆಕ್ಕುಗಣ್ಣುಗಳು ಹಾಗೆ ಚೆಂದ ಕಾಣುತ್ತವೋ?

ಮ—ನೀನು ನಿನ್ನ ಮಗನ ಚೆಲುವಿಕೆಯನ್ನೇ ಬಣ್ಣಿಸುತ್ತೀ. ಉಳಿದ ಅವಯವಗಳ ಹೆಸರನ್ನೇ ಎತ್ತಲೊಲ್ಲೆ. ಇದೇ ಮಾತನ್ನು ಮುಂದಿಯ ಮಕ್ಕಳ ರೂಪವನ್ನು ನೋಡುವಾಗ ಯಾಕೆ ಹಚ್ಚುವದಿಲ್ಲ? ನೋಡು, ಸ್ವತಃ ಮಹತಾಬಳು ಎಂಥ ಜಾಣಳೂ ಕಲಿತವಳೂ ಇದ್ದಾಳೆ.

ಫಾ—ಆಕೆಯ ಜಾಣತನವು ಕಾಸು ಬಾಳದು. ಮೊನ್ನೆ ಆಕೆಯ ಮಗನಿಗೆ ದೊಡ್ಡ ಮನೆತನದ್ದೊಂದು ಹೆಣ್ಣು ಬಂದಿತ್ತು. ಅದಕ್ಕೆ ಮೂಗು ಮುರಿದು ಆ ಹುಶೇನಮಿಯಾನ ಕಿರಿ ಮಗಳನ್ನು ತಕ್ಕೊಂಡಳು. ಇದೇ ಏನು ಆಕೆಯ ಜಾಣತನವು?

ಮ—ಹೌದು, ಇದರೊಳಗೆ ಆಕೆಯು ತಪ್ಪುಮಾಡಿದಳೆಂದು ನಾನು ಎಣಿಸುವದಿಲ್ಲ. ದಿಲಾವರಖಾನನ ಮಗಳು ಆಕೆಯ ಮಗನ ಇಮ್ಮಡಿ ಎತ್ತರ ಇರುವಳು. ಇಷ್ಟೇ ಅಲ್ಲ, ಚೆಲುವೆಯೂ ಇರುವದಿಲ್ಲ. ಹುಶೇನ ಮಿಯಾನ ಮಗಳು ಚೆಲುವೆಯೂ ಕಲಿತವಳೂ ಇರುವಳು.

ಫಾ—ಚೆಲೋದಾಯಿತು; ಅತ್ತೆಯೂ ಕಲಿತಾಕೆಯು; ಮನೆಗೆ ಬರುವ ಸೊಸೆಯೂ ಕಲಿತಾಕೆಯು. ಹೆಚ್ಚಿನದೇನು ಬೇಕು? ಮಹತಾಬಳ

ವಿದ್ಯೆಯು ಆಕೆಗೇನು ಹಿತ ಮಾಡಿತು? ಉಡುತೊಡುಗೆ ತಿದ್ದಿ ತೀಡಿ ಧರಿಸಿಕೊಂಡು, ಬಣ್ಣದ ಮಾತುಗಳನ್ನಾಡುತ್ತ ಸೋಮಾರಿಯಾಗಿ ಆನಂದದಲ್ಲಿ ವೇಳೆ ಕಳೆಯಲಿಕ್ಕೆ ಮಾತ್ರ ಕಲಿತಿರುವಳು.

ಮ—ಅಕ್ಕಾ, ನಾವಿಬ್ಬರೂ ಅವಳಿಗೆ ಸರಿಯಾಗಲಾರೆವು. ನಿನಗೆ ಮಂದಿಯ ದೋಷಗಳನ್ನು ಎಣಿಸಲಿಕ್ಕೆ ಮಾತ್ರ ಬರುತ್ತದೆ. ಎರಡನೆಯವರ ದೋಷಗಳನ್ನಷ್ಟೇ ಎಣಿಸುತ್ತ ಅವರ ಗುಣಗಳನ್ನು ಲೆಕ್ಕಿಸದಿರುವದು ಕೆಟ್ಟದು. ಈ ಚಟವು ನಮ್ಮ ಸ್ವಭಾವವನ್ನು ಕೆಡಿಸುತ್ತದೆ. ನಾವು ಯಾವಾಗಲೂ ದೊಡ್ಡ ಮನಸ್ಸಿನಿಂದ ವಸ್ತುಗಳಲ್ಲಿರುವ ಚೆಲೋ ಗುಣಗಳನ್ನೇ ನೋಡತಕ್ಕದ್ದು, ಅಂದರೆ ನಮಗೆ ಹಿತವಾಗುವದು.

---

## ೧೨ನೆಯ ಪಾಠ.

## ಚಿಕ್ಕ ನಾದಿನಿ. ( ಭಾಗ ೧. )

ಭವಾನಿಯೂ ಶಾರದೆಯೂ ಅತ್ತಿಗೆನಾದಿನಿಯರು. ಭವಾನಿಯು ಎಂಟು ವರ್ಷದವಳು. ಶಾರದೆಗೆ ಹದಿನೇಳು ವರ್ಷ ತುಂಬುತ್ತ ಬಂದಿತ್ತು. ಭವಾನಿಯು ಇಚ್ಛೆಯಿಂದಲೂ ತಾಯಿಯ ಸಲಿಗೆಯಿಂದಲೂ ತಲೆಯೆಲ್ಲ ಹರಟೆ ಕೊಚ್ಚುವವಳಾಗಿದ್ದಳು. ಮರೆಗೆ ನಿಂತು ಮಂದಿಯ ಮಾತು ಕೇಳುವದೂ ಸುಳ್ಳು ಹೇಳುವದೂ ಅವಳಿಗೆ ರೂಢಿಯುಂಡಿತ್ತು. ಇದಲ್ಲದೆ ಅವಳಲ್ಲಿ ಹೊಟ್ಟೆಕಿಚ್ಚು ಬಹಳ.

ಶಾರದೆಯು ಯಾರೊಡನೆಯಾದರೂ ಮಾತಾಡುತ್ತಿದ್ದರೆ, ಇವಳು ಮರೆಗೆ ನಿಂತು ಕೇಳಿ ತಾಯಿಯ ಬಳಿಗೆ ಬಂದು ಅದನ್ನು ಉಪ್ಪುಕಾರ ಹಚ್ಚಿ ಹೇಳುವಳು. ಮತ್ತು ಅದರಲ್ಲಿ ಕೆಲವು ಮಾತುಗಳನ್ನು ಕೈಗಂಟು ಹಾಕುವಳು. ಶಾರದೆಯು ತುಸು ಕುಳಿತಿದ್ದರೆ ತೀರಿತು. ಇವಳು ಕೂಡಲೇ ತಾಯಿಗೆ ತಿಳಿಸುವಳು, ಹಾಗೂ ಹಗಲೆಲ್ಲ ಹೀಗೆಯೇ ಕೂತಿರುತ್ತಾ

ಳೆಂದು ಹೇಳುವಳು. ಶಾರದೆಯ ತಪ್ಪುಗಳು ಭವಾನಿಯಿಂದ ತಾಯಿಯ ಕಿವಿಗೆ ಮುಟ್ಟದಿರುವದಂತೂ ಅಸಂಭವವಾಗಿತ್ತು.

ತಾಯಿಯು ಭವಾನಿಯ ಮಾತು ಕೇಳಿ ಶಾರದೆಗೆ ಹಗಲೆಲ್ಲ ಕಟ ಕಟ ಮಾಡುತ್ತಿದ್ದಳು. ಒಮ್ಮೆ ಭವಾನಿಯು ತಾಯಿಯ ಬಳಿಗೆ ಬಂದು ಅತ್ತಿಗೆಯು ಇಂದು ದೊಡ್ಡವ್ವನಾದ ಉಮಾಬಾಯಿಯ ಮುಂದೆ ಮನೆಯ ಸಂಬಂಧದ ಕೆಟ್ಟಕೆಟ್ಟ ಮಾತುಗಳನ್ನು ಆಡುತ್ತ ನಿಂತಿದ್ದಾ ಳೆಂದು ಹೇಳಿದಳು. ಬಳಿಕ ಕೇಳುವದೇನು? ತಾಯಿಯು ಸಿಟ್ಟಿನ ಬೆಂಕಿ ಯಾದಳು. ಅಯ್ಯೋ! ಭಾಗಾದಿಯ ಮುಂದೆ (ಭಾಗಾದಿಗಳು ಯಾವಾ ಗಲು ಬಡಿದಾಡುವದು ಸಹಜ) ನಮ್ಮನ್ನಾಡಿಕೊಂಡಳೇ? ಎಂದು ಶಾರ ದೆಯನ್ನು ಕರೆದು ಆಗಲಾರದವರ ಮುಂದೆ ಏನೇನು ಹೇಳಿದಿ ಎಂದು ಗದರಿಸಿದಳು. ಆದಕ್ಕೆ ಶಾರದೆಯು—“ಉಮಾಬಾಯಿಯ ಮುಂದೆ ನಮ್ಮ ಮನೆತನದ ಬಗ್ಗೆ ಒಂದು ಮಾತು ಸಹ ಆಡಿಲ್ಲ. ಇಂಥಾ ಮಾತಾಡಿ ಮನೆಗೆ ಕುಂದು ತರುವಂಥ ದಡ್ಡಳು ನಾನಲ್ಲ. ಹೀಗೆ ಮಾಡಿದರೆ ನಮ್ಮ ಮನೆತನದ ಹೆಸರು ಕೆಡುವದೆಂದೂ, ಅದರಿಂದ ನಮ್ಮ ಮಾನಕ್ಕೂ ಕೊರತೆ ಬರುವದೆಂದೂ ನಾನು ಒಳಿತಾಗಿ ಬಲ್ಲೆನು. ನಮ್ಮ ಓಣಿಯೊಳ ಗಿನ ಕಡೆ ಮನೆಯ ರಾಧಾಬಾಯಿಯ ಒಬ್ಬನೇ ಒಬ್ಬ ಮಗನು ಪ್ಲೇಗಿ ನಿಂದ ಸತ್ತನು. ಅವನಿಗೆ ಮದುವೆಯಾಗಿತ್ತು. ಆ ಹುಡುಗಿಗೆ ಹನ್ನೆರಡು ವರ್ಷ. ಪಾಪ, ಆ ಹುಡುಗೆ ಕೆಟ್ಟಿತಲ್ಲ, ಎಂದು ಉಮಾಬಾಯಿಯೂ ನಾನೂ ಹಳಹಳಿಸುತ್ತ ನಿಂತಿದ್ದೆವು. ಬೇಕಾದರೆ ಉಮಾಬಾಯಿಯನ್ನು ಕರೆದು ಕೇಳಿಕೊಂಡು ಮನಗಾಣಿರಿ,” ಎಂದಳು.

ಭ—ಇದರೊಳಗೆ ಮನಗಾಣತಕ್ಕದ್ದೇನು? ನಿನ್ನೆ ನಮ್ಮ ಮನೆಯಲ್ಲಿ ಇಲಿ ಬಿದ್ದು ಸತ್ತಿತ್ತೆಂದು ನೀನು ಹೇಳಲಿಲ್ಲವೇ?

ಶಾ—ಹೌದು ತಂಗೀ, ಹೌದು; ಇದರಿಂದ ಮನೆತನಕ್ಕೇನು ಕುಂದು ಬರುವದು? ಇಲಿ ಬಿದ್ದು ಸತ್ತದ್ದು ಮನೆಯವರ ತಪ್ಪಲ್ಲ. ಮಾನನವರು

ಈ ಮೊದಲೇ ಮ್ಯುನಿಸಿಪಾಲಿಟಿಗೆ ಇದನ್ನು ತಿಳಿಸಿದ್ದಾರೆ, ಇದು ಬಚ್ಚಿಡುವ ಸಂಗತಿಯಲ್ಲ.

ತಾಯಿ—ಭವಾನೀ, ಇಲಿ ಸತ್ತ ಮಾತು ಹೇಳಿದ್ದೇನು ತಪ್ಪಲ್ಲ; ಉಮಾಬಾಯಿಯ ಮುಂದೆ ಮತ್ತೇನು ಹೇಳಿದಳು?

ಭ—ಮತ್ತೇನೂ ಇಲ್ಲ.

ತಾಯಿ—ಅತ್ತಿಗೆಯ ಮೇಲೆ ಆಡಿಕೊಂಡಳೆಂದು ಸುಳ್ಳೇ ತಪ್ಪು ಹೊರಿಸಿ, ನನ್ನ ಮುಂದೆ ಇಲ್ಲದ್ದೊಂದು ಚಾಡೀ ಹೇಳಿ, ಆಕೆಗೆ ಸಿಟ್ಟು ಮಾಡಿಸಿದಿ, ಇದು ನಿನ್ನ ತಪ್ಪು. ಈ ತಪ್ಪಿಗೆ ನಿನಗೆ ತಕ್ಕ ಶಿಕ್ಷೆಯನ್ನು ಕೊಡುವದು ತಕ್ಕದ್ದು.

ಶಾ—ಅತ್ತೆಯವರೇ, ಭವಾನಿಯು ಇನ್ನೂ ಚಿಕ್ಕವಳು. ಆಕೆಯ ತಪ್ಪನ್ನು ಈ ಸಾರೆ ಕ್ಷಮಿಸಬೇಕು.

ಭವಾನಿಗೆ ಕೆಡಕೆನಿಸಿತು. ಅವಳು ನಾಚಿ ಕೆಳಗೆ ಮೋರೆ ಮಾಡಿಕೊಂಡು ನಿಂತಳು. ಕಣ್ಣುಗಳಲ್ಲಿ ನೀರು ತುಂಬಿದವು. ಆಕೆಯು ಮನಸ್ಸಿನಲ್ಲಿ ತನ್ನ ಕೆಟ್ಟ ನಡತೆಯ ಬಗ್ಗೆ ಹಳಹಳಿಸಿದಳು. ಅತ್ತಿಗೆಯು ತನ್ನ ಮೇಲೆ ಸಿಟ್ಟಾಗುವದನ್ನು ಬಿಟ್ಟು ತನ್ನ ಕಡೆಯಿಂದಾದ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡಳು. ಆಹಾ! ಅತ್ತಿಗೆಯು ನಿಜವಾದ ದೊಡ್ಡ ಮನಸ್ಸಿನವಳು ಎಂದು ಅಂದುಕೊಂಡಳು. ಆ ಪ್ರಸಂಗವು ಅವಳ ಮನಸ್ಸಿನಲ್ಲಿ ಬಿಂಬಿಸಿತು. ಒಮ್ಮೆ ಭವಾನಿಯು ಮಾಡದೊಳಗಿನದೊಂದು ಉಂಡೆಯನ್ನು ಕದ್ದುಕೊಂಡು ಅಟ್ಟದ ಮೇಲೆ ಹೋಗಿ, ಯಾರಿಗೂ ತಿಳಿಯದಂತೆ ಕತ್ತಲೆಯಲ್ಲಿ ತಿನ್ನುತ್ತಿದ್ದಳು. ಅಡಿಗೆಗೆ ಬೇಳೆ ತರಬೇಕೆಂದು ಶಾರದೆಯು ಅದೇ ಹೊತ್ತಿಗೆ ಅಟ್ಟಕ್ಕೆ ಬಂದಳು. ಆಗ ಭವಾನಿಯು ಅರ್ಧ ಉಂಡೆಯನ್ನು ಕೈಯಲ್ಲಿ ಹಿಡಿದಿದ್ದಳು. ಅರ್ಧ ಬಾಯಿಯಲ್ಲಿತ್ತು. ಅತ್ತಿಗೆಯನ್ನು ಕಂಡ ಕೂಡಲೆ ತಾನು ಕದ್ದು ತಿನ್ನುವದು ಅತ್ತಿಗೆಯ ಕಣ್ಣಿಗೆ ಬಿತ್ತೆಂದು ನಾಚಿದಳು. ಮತ್ತು ಈಕೆಯು ಅಣ್ಣನ ಮುಂದೊ

ಯ್ದು ನನಗೆ ಹೊಡಿಸುವಳೆಂದು ಅಂಜಿದಳು. ಶಾರದೆಯು ಭವಾನಿಯನ್ನು ಕಂಡು—"ತಂಗೀ, ಇದೇನು ಉಂಡೀ ಕದ್ದು ತಿನ್ನುತ್ತೀಯಾ? ನಾನು ಅತ್ತೆಯವರ ಮುಂದೆ ಹೇಳಿದರೆ, ನಿನ್ನ ಗತಿ ಏನಾದೀತು ಬಲ್ಲೆಯಾ?" ಎಂದಳು.

---

## ೧೩ನೆಯ ಪಾಠ.

### ಚಿಕ್ಕ ನಾದಿನಿ. (ಭಾಗ ೨.)

ಭವಾನಿಯು ತಾನು ಕದ್ದು ತಿಂದ ಸಂಗತಿಯನ್ನು ಅತ್ತಿಗೆಯು ಅವ್ವನ ಮುಂದೆ ಹೇಳಲಿಲ್ಲೆಂದು ಸಂತೋಷಪಟ್ಟಳು. ಆಕೆಯ ದೊಡ್ಡ ಮನಸ್ಸಿಗಾಗಿ ಅವಳನ್ನು ಹೆಚ್ಚು ಪ್ರೀತಿಸತೊಡಗಿದಳು. ಮುಂದೆ ಕೆಲವು ದಿವಸಗಳಲ್ಲಿ ತಾಯಿಯು ಊರಿಗೆ ಹೋಗಬೇಕಾಯಿತು. ಭವಾನಿಯನ್ನು ಕರಕೊಂಡು ಹೋಗುವಂತಿದ್ದಿಲ್ಲ. ಆದ್ದರಿಂದ ಅವಳು ಹೋಗುವ ಮುಂದೆ ಸೊಸೆಯನ್ನು ಕರೆದು—ಮುದ್ದು ಮಗಳೇ, ನಾನು ಬರಲಿಕ್ಕೆ ತಿಂಗಳೊಪ್ಪತ್ತು ಬೇಕು. ನೀನು ಬುದ್ಧಿವಂತೆಯೂ ಜಾಣೆಯೂ ಇದ್ದದರಿಂದ ಮನೆಯ ಚಿಂತೆ ನನಗಿಲ್ಲ. ಆದರೆ ಭವಾನಿಯನ್ನು ಮಾತ್ರ ಚೆನ್ನಾಗಿ ನೋಡುತ್ತಿರು ಎಂದು ಹೇಳಿ, ಭವಾನಿಯನ್ನು ಕರೆದು—ಮಗುವೇ, ನೀನು ಚಿಕ್ಕವಳು, ಅತ್ತಿಗೆ ಹೇಳಿದಂತೆ ಕೇಳುತ್ತಿರು, ನಿನ್ನ ಮೇಲೆ ದೂರು ಹೇಳುವ ಪ್ರಸಂಗ ತರಗೊಡಬೇಡ ಎಂದು ಹೇಳಿದಳು.

ತಾಯಿಯು ಹೋದ ಬಳಿಕ ಭವಾನಿಯು ಅತ್ತಿಗೆಯ ಕೈಯಲ್ಲಿರಬೇಕಾಯಿತು. ಅತ್ತಿಗೆಯನ್ನು ನಾನು ಬಹಳ ಕಾಡಿದ್ದೇನೆ. ಆದರಿಂದ ಆಕೆಯು ಇನ್ನು ತನ್ನ ಸೇಡು ತೀರಿಸಿಕೊಳ್ಳುವಳೋ ಏನೋ ಎಂದು ಹೆದರಿದಳು. ಆದರೆ ಶಾರದೆಯು ಅತ್ತೆಯು ಹೋದ ಬಳಿಕ ಭವಾನಿಗೆ ಚೆಲೋ ನಡತೆಗಳನ್ನು ಕಲಿಸಲಾರಂಭಿಸಿದಳು. ಶಾರದೆಯು ಭವಾನಿಯ ಜೊತೆಗೆ ಕುಳಿತುಕೊಂಡು ದಿನಾಲು ಹೊಸ ಸಂಗತಿಗಳನ್ನು ಕಲಿಸುವಳು. ಒಳ್ಳೆಯ

ಬುದ್ಧಿಯ ಮಾತುಗಳನ್ನು ಹೇಳುವಳು. ಸವಿ ಸವಿ ಕಥೆಗಳನ್ನು ಹೇಳಿ ನೀತಿಯನ್ನೂ ಕಲಿಸುವಳು, ಒಳ್ಳೆಯ ಆಟಗಳನ್ನು ಆಡುವಳು. ತಾಯಿ ಗಿಂತ ಹೆಚ್ಚಾಗಿ ಅವಳ ಹೊಟ್ಟೆ ನೆತ್ತಿಗಳನ್ನು ನೋಡುವಳು. ಹೀಗೆ ಕೆಲವು ದಿವಸಗಳು ಹೋದ ಬಳಿಕ ಭವಾನಿಯ ಸ್ವಭಾವವು ತೀರ ಬದಲಾ ಯಿತು. ಆಕೆಯ ಕೆಟ್ಟ ಚಟಗಳೆಲ್ಲ ಅವಳನ್ನು ಬಿಟ್ಟುಹೋದವು. ಮೊದಲು ಕೆಲಸಕ್ಕೆ ತಪ್ಪಿಸುತ್ತಿದ್ದಳು. ಈಗ ಕೆಲಸ ಮಾಡಲಿಕ್ಕೆ ಮುಂದು ವರಿಯ ತೊಡಗಿದಳು. ದಿನಾಲು ಹೊತ್ತಿಗೆ ಸರಿಯಾಗಿ ಉಣ್ಣುತ್ತಿರು ವದರಿಂದ ಆಕೆಯ ಪ್ರಕೃತಿಯು ಸುಧಾರಿಸಿತು. ಅತ್ತಿಗೆಯು ಅವಳಿಗೆ ಪಂಚಪ್ರಾಣವಾದಳು. ಅತ್ತಿಗೆಯು ಕ್ಷಣ ಅಗಲಿದರೆ ಸಾಕು, ಕಕ್ಕಾ ವಿಕ್ಕಿಯಾಗುವಳು.

ಒಂದು ದಿನ ಭವಾನಿಗೆ ಭರದಿಂದ ಜ್ವರ ಬಂದವು. ಎರಡು ದಿವಸ ಅವು ಇಳಿಯಲೇ ಇಲ್ಲ; ಮೂರನೆಯ ದಿವಸ ಎಚ್ಚರದಪ್ಪಿತು. ಆಗ ಶಾರ ದೆಯು ಅಂಜಿ ಡಾಕ್ಟರನನ್ನು ಕರೆಸಿದಳು. ಅವನು ಬಂದು—“ಇವು ಹದಿನಾಲ್ಕು ದಿವಸದ ಕಟ್ಟಿನ ಜ್ವರ; ಆದರೂ ಅಂಜುವ ಕಾರಣವಿಲ್ಲ; ಔಷಧವನ್ನು ಹೊತ್ತು ಹೊತ್ತಿಗೆ ಹಾಕುತ್ತ ಆಕೆಯು ಬೇಡಿದಾಗ ಗಂಜಿ ಯನ್ನಾಗಲಿ ಹಾಲನ್ನಾಗಲಿ ಕೊಡುತ್ತ ಚೆನ್ನಾಗಿ ಆರೈಕೆ ಮಾಡಿದರೆ ಜೀವ ಕ್ಕೇನೂ ಭಯವಿಲ್ಲ,” ಎಂದು ಹೇಳಿದನು. ಕಟ್ಟಿನ ಜ್ವರವೆಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಶಾರದೆಯು ಹೆದರಿದಳು. ಭವಾನಿಯ ಹಾಸಿಗೆಯ ಬದಿಗೆ ಹಗಲೂ ಇರುಳೂ ಕುಳಿತುಕೊಂಡು ಎಚ್ಚರದಿಂದ ಔಷಧಪಥ್ಯಗಳ ಉಪಚಾರವನ್ನು ಮಾಡಿಸಿದಳು. ಕಾಲಕಾಲಕ್ಕೆ ಔಷಧ ಹಾಕುವಳು; ಪಥ್ಯವನ್ನಿಕ್ಕುವಳು; ಮಿಕ್ಕ ಉಪಚಾರವನ್ನೂ ಮಾಡುವಳು. ಈಕೆಯ ಆರೈಕೆಯಿಂದ ಭವಾನಿಯು ಹೆಚ್ಚು ಸೊರಗಲಿಲ್ಲ. ಹದಿನಾಲ್ಕನೆಯ ದಿವಸ ಜ್ವರ ಆರಿದವು. ಭವಾನಿಗೆ ಶಾರದೆಯು ದೇವರಾಗಿ ತೋರಿದಳು. ಅವಳು ತಾಯಿಗಿಂತ ಶಾರದೆಯನ್ನು ಹೇಳಕೂಡದಷ್ಟು ಪ್ರೀತಿಸತೊಡಗಿದಳು.

ಇದಾದ ಕೆಲವು ದಿವಸಗಳ ಮೇಲೆ ತಾಯಿಯು ಬಂದಳು. ಮೊದಲು ಮನೆಯೆಲ್ಲಾ ಅಡ್ಡಾಡಿ ನೋಡಿದಳು. ಎಲ್ಲ ವಸ್ತುಗಳನ್ನು ಓರಣದಿಂದ ಇಟ್ಟದ್ದನ್ನು ನೋಡಿ ಆನಂದಪಟ್ಟಳು. ಭವಾನಿಯು ಬಹು ದಿವಸದ ಬೇನೆಯಿಂದ ಬಹಳವಾಗಿ ಸೊರಗಿರಬಹುದೆಂದು ಅಂಜಿದ್ದಳು. ಆದರೆ ಆಕೆಯು ಆರೋಗ್ಯದಿಂದಿರುವದನ್ನು ಕಂಡು ಸಂತೋಷಪಟ್ಟಳು. ಶಾರದೆಯೂ ಭವಾನಿಯೂ ಅವಳು ಊರಲ್ಲಿಲ್ಲದಾಗ ನಡೆದ ಸಂಗತಿಗಳನ್ನೆಲ್ಲ ಹೇಳಿದರು. ಆಗ ತಾಯಿಯು—ಭವಾನಿಯು ನಿನ್ನ ಮಾತು ಕೇಳಿಕೊಂಡಿದ್ದಳೋ? ಎಂದು ಕೇಳಲು, ಶಾರದೆಯು ಭವಾನಿಯ ನಡೆನುಡಿಗಳನ್ನು ಹೊಗಳಿದಳು. ಬರಬರುತ್ತ ಭವಾನಿಯ ನಡೆನುಡಿಗಳನ್ನು ಕಂಡು ಆಕೆಯು ಗುಣವಂತಿಯಾಗಿರುವಳೆಂದೂ ಅತ್ತಿಗೆಗೆ ಜೀವ ಕಳಕೊಳ್ಳುವಳೆಂದೂ ಮನಗಂಡಳು. ಎಂದಾದರೂ ಸೊಸೆಯ ಬಗ್ಗೆ ಏನಾದರೂ ಕೇಳಿದರೆ ಭವಾನಿಯು ಅತ್ತಿಗೆಯ ಬಗ್ಗೆ ಸದಭಿಪ್ರಾಯವನ್ನು ಕೊಡುವಳು. ಒಂದು ದಿನ ತಾಯಿಯು ಭವಾನಿಯನ್ನು ಕರೆದು—"ಮಗಳೇ, ಮೊದಲು ನೀನು ಯಾವಾಗಲೂ ಅತ್ತಿಗೆಯ ದೋಷಗಳನ್ನೇ ಹೇಳುತ್ತಿದ್ದೆ, ಇಲ್ಲದ್ದೊಂದು ಸುಳ್ಳು ಹೇಳುತ್ತಿದ್ದೆ, ಈಗ ಹೀಗೇಕೆ?" ಎಂದು ಕೇಳಿದರೆ, ಭವಾನಿಯು—ಅವ್ವಾ, ಹಿಂದಿನದನ್ನು ತೆಗೆಯಬೇಡ, ನಾನು ಮೊದಲಿನ ಹುಡುಗಾಟಿಕೆಯನ್ನೂ ಕೆಟ್ಟ ನಡತೆಯನ್ನೂ ಬಿಟ್ಟದ್ದೇನೆ ಎಂದು ಹೇಳುವಳು.

---

## ೧೫ನೆಯ ಪಾಠ.

## ಗರ್ವ.

ರಾಗ ಕಾಂಬೋದಿ. ತಾಳ ಝಂಪೆ.

ಗರುವದಿಂ ಬಿರ್‍ರನೆ ಬಿಗಿಯಬೇಡಾ ।
ಉರುವರೆಯೊಳದರಿಂದ ಬಲುಕೇಡು ನೋಡಾ ॥ ಪಲ್ಲ ॥

ತರತರದ ಕಲೆಗಳೊಳು ಸಿರಿಗಳೊಳು ಚೆಲುವಿನೊಳು ।
ಸರಿ ಯಾರು ನನಗೆಂಬ ಹಮ್ಮು ಬೇಡೌ ॥
ಹುರುಳಿಲ್ಲ ಹುರುಳಿಲ್ಲವಾ ತಿಳಿಯೊಳೆಳ್ಳನಿತು ।
ಸಿರಿಗೆ ಸುಜನತೆಯೆ ಭೂಷಣವೆಂಬುದರಿಯಾ ॥ ೧ ॥

ಅನ್ಯರನು ಹಳಿಯುತೊಣಹೆಮ್ಮೆಯಿಂ ನಡೆಯುವದು ।
ತನ್ನ ಕೀಳ್ತನ ತೋರ್ಪುದಿದರಿಂದಲೇ ॥
ಮಣ್ಣು ಮುಕ್ಕಿರುವರೊಳ್ಳೊಳ್ಳೆ ಭೂಪಾಲಕರು ।
ಇನ್ನುಳಿದ ಕುನ್ನಿಗಳ ಪಾಡೇನು ಪಸುಳೇ ॥ ೨ ॥

ದುರುಳ ರಾವಣ ಕೆಟ್ಟ ದುಷ್ಟ ಕಂಸನು ಕೆಟ್ಟ ।
ಕುರುಕುಲೇಶ್ವರನು ಕೆಟ್ಟನು ಕೆಟ್ಟನೌ ॥
ಗರುವದಿಂ ಕೇಡಿಗೀಡಾಗದವರಾರಿಕೋ ।
ಕರದೆ ಕಡ್ಡಿಯ ಕೊಟ್ಟು ಪೇಳ್ವೆನದರಿಂದ ॥ ೩ ॥

ಅರಿದವರೆನಲ್ಕಹಂಕಾರವಿರದುದೆ ಸಾಕ್ಷಿ ।
ತರಳೆಯೇ, ತುಂಬಿರ್ದ ಕೊಡ ತುಳುಕದು ॥
ಅರಿಯಲದ್ಭುತ ಜಗವ ಮಾಡಿರುವ ಗೌರೀಶ ।
ನರಿಯದವನಂತಿರುವ ಪರಿಯ ನೀನರಿದು ॥ ೪ ॥

---

## ೧೫ನೆಯ ಪಾಠ.

# ಮಳೆ.

ಭಾಮಿನೀಷಟ್ಪದಿ.

ಸೋಗೆಗಣ್ಣಳೆ ನೋಡು ಮುಗಿಲೊಳು ।
ಮೇಘಗಳ ಸಂಭ್ರಮುವನೈಸಲೆ ।
ಹೇಗೆ ಕಾಡಿಗೆಬಣ್ಣದಿಂ ಕಪ್ಪಾಗಿ ತೋರುವವು ॥

ವೇಗದಿಂದತ್ತಿತ್ತ ಸುತ್ತಲು ।
ಹೋಗತೆಲರಿಂ ಕೂಡುತಂ ಮರೆ ।
ಯಾಗುತಂ ರವಿಮಂಡಲಕೆ ಸಲೆ ಮಬ್ಬುಗವಿಸುವವು ॥ ೧ ॥

ಎದ್ದಿತೌ ಕೆಂಧೂಳು ಕತ್ತಲು ।
ಬಿದ್ದಿತೌ ಕೋಲ್ಮಿಂಚು ಮಿಂಚಲು ।
ಮುದ್ದುಗೆಯ್ದೆ ಕಣ್ಣೊಳಗೆ ದೀಪವ ಹಚ್ಚಿದಂತಾಯ್ತು ॥
ಬಿದ್ದಿತಾಗಳೆ ಖಟ್ ಖಡಲ್ಲೆನೆ ।
ಸದ್ದಿನಿಂ ಸಿಡಿಲಿಳೆಗೆ ಘುಡುಘುಡು ।
ಗದ್ದರಿಸುವಾ ಗುಡುಗ ಕೇಳೌ ಭಯವು ಬರುತಿಹುದು ॥ ೨ ॥

ಹರುಷದಿಂ ದನಿದೋರುತಂ ಹಿಂ- ।
ಗರಿಗೆದರಿ ನವಿಲಾಡುತಿರುವವು ।
ಭರದೆ ಗರ್ಜಿಸುತೇರಿಗೆರುಗುವವೆದ್ದು ಸಿಂಹಗಳು ॥
ಸುರಿಯುವದು ನೆಲೆಗೆಟ್ಟು ಮಳೆ ನೆರೆ ।
ಹರಿಯುವವು ಹೊಳೆಹಳ್ಳಕಾಲುವೆ ।
ಒರೆಯಲೇನೆರಕೊಂಬವೋಲ್ ಭೂದೇವಿ ಜಲಮಯಳು ॥ ೩ ॥

ನಡುಗಿಸುತ ದಾರಿಗಳನಾಗಳೆ ।
ಹುಡುಕಹಚ್ಚಿತು ಗಿಡಗಳಂಡನು ।
ಅಡವಿಯಿಂದೋಡಿಸುವದೂರಿಂಗೆ ದನಕರುಗಳನ್ನು ॥
ಅಡಗಿಸಿತು ಖಗಮೃಗಗಳುಲಿವನು ।
ಗಡಬಿಡಿಯನೆಬ್ಬಿಸಿತು ಸಂತೆಯೊ- ।
ಳೆಡೆವಿಡದೆ ಕಾರ್ಗರೆಯುತೀಪರಿ ಚೇಷ್ಟೆ ಮಾಡುವದು ॥ ೪ ॥

ಹಸುರು ಮುರಿಯುವ ಪುಲ್ಗಳಿಂ ಪೊಸ ।
ಸಸಿಗಳಂ ಭೂಮಾತೆ ಪಚ್ಚೆಯ ।

ವಸನವನು ತಳೆದಂತೆವೋಲ್ ಮಳೆಯಾಗಲೆಸೆಯುವಳು ||
ವಸುಧೆಜೀವಿಗಳೈದುವವು ಸಂ- |
ತಸವನುರೆ ಕೂಳಗ್ಗಣೆಗಳಿಂ- |
ದಸಮ ಗುರು ಗೌರೀಶದಯಪಿದನೇನ ಬಣ್ಣಿಸಲಿ || ೫ ||

---

### ೧೬ನೆಯ ಪಾಠ.

## ಚಾಂದಬೂ ಇಮಾಮಬೂ.

ಒಂದು ಹಳ್ಳಿಯಲ್ಲಿ ಅಲ್ಲೀಭಾಯಿ ಎಂಬ ವರ್ತಕನಿದ್ದನು. ಅವನ ಸೊಸೆಯ ಹೆಸರು ಇಮಾಮಬೂ. ಅವರ ನೆರೆಯಲ್ಲಿ ಪೀರಮಹಮ್ಮದ ನೆಂಬ ಕೂಲಿಕಾರನು ಚಾಂದಬೂ ಎಂಬ ಹೆಂಡತಿಯೊಡನೆ ಇರುತ್ತಿದ್ದನು. ಇವನು ದಿನಾ ಕೂಲಿಯಿಂದ ಗಳಿಸಿದ ಹಣವನ್ನೆಲ್ಲಾ ಹೊಟ್ಟೆಗೆ ವೆಚ್ಚ ಮಾಡುತ್ತಿದ್ದನು. ಚಾಂದಬೂವಿಗೆ ಚೆಲೋ ಊಟವನ್ನು ಮಾಡುವ ಹಾಗೂ ಬಾಯಿಸವಿ ತಿನ್ನುವ ಚಟ ಬಿದ್ದಿತ್ತು.

ಚಾಂದಬೂವು ಒಳ್ಳೆಯ ಸ್ವಭಾವದವಳಿದ್ದಳು. ಅದರಿಂದ ಅವಳಿಗೂ ಇಮಾಮಬೂವಿಗೂ ಗೆಳೆತನ ಬಿದ್ದಿತ್ತು. ಇವಳು ಕೂಡಿದಾಗ ಚಾಂದ ಬೂವಿನ ಮನೆಗೆ ಬರುತ್ತಿದ್ದಳು. ತಾನು ಬಂದಾಗೆಲ್ಲ ಚಾಂದಬೂವು ಮಿಠಾಯಿ ತಿನ್ನುತ್ತಿರುವದನ್ನು ಕಂಡು ಮನೆಗೆ ಬಂದು ಮಾವನಿಗೆ— "ಮಾವನವರೇ, ನಾವು ಸಾವುಕಾರರಿದ್ದರೂ ಅನ್ನರೊಟ್ಟಿಗಳನ್ನು ತಿನ್ನು ತ್ತೇವೆ. ಪೀರಮಹಮ್ಮದನು ದಿನಾ ಐದಾರು ಆಣೆ ಕೂಲಿಯನ್ನು ತಂದು ನಿತ್ಯದಲ್ಲಿ ಮಿಠಾಯಿ ತಿನ್ನುವನು. ಇಷ್ಟು ದುಡ್ಡಿದ್ದು ನಾವೇಕೆ ತಿನ್ನ ಬಾರದು?" ಎಂದು ಕೇಳಿದಳು. ಅಲ್ಲೀಭಾಯಿಯು, ಸೊಸೆಯು ಚಾಂದ ಬೂವಿನ ಸಂಗತಿಯಿಂದ ಕೆಡುವಳೆಂದು ತಿಳಿದು ಇನ್ನು ಆಕೆಯ ಗೆಳೆತನ ಬಿಡೆಂದು ಹೇಳುವದು ತರವಲ್ಲ; ಇದಕ್ಕೊಂದು ಬೇರೆ ಉಪಾಯವನ್ನು

ಯೋಚಿಸಬೇಕೆಂದು ನೆನೆದನು. ಈ ಮಾತಾಗಿ ಕೆಲವು ದಿವಸಗಳು ಕಳೆದವು. ಇಮಾಮಬೂವಿಗೆ ಆ ಮಾತು ಮರೆತುಹೋಯಿತು. ಒಂದು ದಿವಸ ಅಲ್ಲೀಭಾಯಿಯು ಸೊಸೆಯನ್ನು ಕರೆದು—"ನಿನ್ನ ಗೆಳತಿಯು ಬಡತನದಲ್ಲಿರುವಳು. ಇಗೋ ಈ ಹತ್ತು ರೂಪಾಯಿಗಳನ್ನು ಹಿಡಿ, ಆಕೆಯ ಕೈಯಲ್ಲಿ ಕೊಟ್ಟರೆ ತಕ್ಕೊಳ್ಳಲಿಕ್ಕಿಲ್ಲ. ಆಕೆಗೆ ತಿಳಿಯದಂತೆ ಆಕೆಯ ಕೈಯಲ್ಲಿ ಬೀಳುವಂತೆ ಎಲ್ಲಿಯಾದರೂ ಇಟ್ಟು ಬಾ," ಎಂದು ಹೇಳಿದನು. ತನ್ನ ಗೆಳತಿಗೆ ಸಹಾಯ ಮಾಡುವ ಪ್ರಸಂಗವು ಒದಗಿದ್ದನ್ನು ಕಂಡು ಇಮಾಮಬೂವಿಗೆ ಸಂತೋಷವಾಯಿತು. ಆಕೆಯು ಹೊತ್ತು ನೋಡಿ ಒಂದು ಚೀಲದಲ್ಲಿ ಆ ರೂಪಾಯಿಗಳನ್ನು ಹಾಕಿ ಬೀಸುವ ಕಲ್ಲ ಹತ್ತರ ಆಕೆಗೆ ತಿಳಿಯದಂತೆ ಇಟ್ಟು ಬಂದಳು.

ನಸುಕಿನಲ್ಲಿ ಚಾಂದಬೂವು ಬೀಸಲಿಕ್ಕೆ ಹಾಕಬೇಕೆಂದು ಅಲ್ಲಿಗೆ ಬಂದು ಕಲ್ಲು ಉಡುಗುವಷ್ಟರಲ್ಲಿ ರೂಪಾಯಿಗಳ ಚೀಲವು ಕಾಲಿಗೆ ಹತ್ತಿತು. ಅದನ್ನು ತಕ್ಕೊಂಡು ಬಿಚ್ಚಿದಳು. ಅದರೊಳಗೆ ಹತ್ತು ರೂಪಾಯಿಗಳು ಇದ್ದವು. ಅವುಗಳನ್ನು ನೋಡಿ ಅವಳಿಗೆ ಹಿಡಿಸಲಾರದಷ್ಟು ಸಂತೋಷವು ಉಂಟಾಗಲು, ದೇವರ ಉಪಕಾರವನ್ನು ನೆನಸಿ ಅವನನ್ನು ಬೇಡಿಕೊಂಡಳು. ಬಳಿಕ ಇವನ್ನೇನು ಮಾಡಬೇಕೆಂದು ತುಸು ಹೊತ್ತು ಚಿಂತಿಸಿ, ನನ್ನ ಕೈಯಲ್ಲಿ ಅರಗಿನ ಬಳೆಗಳಿವೆ, ಇವುಗಳ ಹಿಂದೆ ಬೆಳ್ಳಿಯ ಬಳೆಗಳಾದರೆ ಚೆಂದ ಕಾಣುತ್ತವೆ. ಅವನ್ನು ಮಾಡಿಸಬೇಕೆಂದು ನಿಶ್ಚಯಿಸಿ, ಅಗಸಾಲನ ಮನೆಗೆ ಹೋದಳು. ಅವನು ಹತ್ತು ರೂಪಾಯಿಗೆ ಬೆಳ್ಳಿಯ ಬಳೆಗಳಾಗುವದಿಲ್ಲ; ಹದಿನೈದು ರೂಪಾಯಿ ಬೇಕು ಎಂದು ಹೇಳಿದನು. ಅದಕ್ಕವಳು ಹತ್ತು ರೂಪಾಯಿಗಳನ್ನಂತೂ ದೇವರು ಕೊಟ್ಟಿರುವನು. ಇನ್ನೂ ಐದು ರೂಪಾಯಿ ನಾನು ಉಳಿಸಿ ಬಳೆ ಮಾಡಿಸಿಕೊಳ್ಳಬೇಕೆಂದು ಬಗೆದು ಊಟಕ್ಕೆ ಸವಿ ಅಡಿಗೆಯನ್ನು ಬಿಟ್ಟು ಬರೇ ಕಿಚಡಿಯನ್ನು ಮಾಡಿದರೆ ಎರಡಾಣೆ ಉಳಿಯುವದೆಂದು ತಿಳಿದು ಅದನ್ನು

ಮಾಡಿದಳು. ಪೀರಮಹಮ್ಮದನು ಊಟಕ್ಕೆ ಬರಲು ಸವಿ ಅಡಿಗೆಗೆ ಬದಲು ಕಿಚ್ಚಡಿಯನ್ನು ನೀಡಿದಳು. ಅವನು ಹೀಗೇಕೆ ಎಂದು ಕೇಳಲು ಆಕೆಯು ಎಲ್ಲ ಸುದ್ದಿಯನ್ನು ಹೇಳಿದಳು. ಇದರಿಂದ ನನಗೆ ಬೆಳ್ಳಿಯ ಬಳೆಗಳು ದೊರೆಯುವವೆಂದು ನುಡಿದಳು. ಇದೇ ಮೇರೆಗೆ ಅವಳು ರೊಟ್ಟಿಕಿಚ್ಚಡಿಗಳನ್ನೇ ದಿನಾಲು ಮಾಡುತ್ತ ಉಳಿದ ಹಣವನ್ನು ಒತ್ತಟ್ಟಿಗೆ ಕೂಡಿಡುತ್ತ ಮೂರು ನಾಲ್ಕು ದಿವಸಕ್ಕೊಮ್ಮೆ ಎಣಿಸಿ ನೋಡುತ್ತಿರಲು ತಿಂಗಳ ಕೊನೆಗೆ ಐದು ರೂಪಾಯಿ ಕೂಡಲು ಬಳೆ ಮಾಡಿಸಿ ಇಟ್ಟುಕೊಂಡಳು. ಆ ಮೇಲೆ ಅವಳಿಗೆ ತನ್ನ ಕೊರಳು ಭಣಭಣ ಕಾಣಿಸತೊಡಗಿತು. ಸರಿಗೆಯಾದರೆ ನೆಟ್ಟಗೆಂದು ಎನಿಸಿತು. ಅದರಂತೆ ಕೂಡಹಾಕಿ ಸರಿಗೆ ಮಾಡಿಸಿದಳು. ಈ ಮೇರೆಗೆ ಅವಳು ವಸ್ತ ಮಾಡಿಸಬೇಕೆಂಬ ಆಸೆಯಿಂದ ಬಾಯಿಸವಿ ಬಿಟ್ಟು ಕೈ ಬಿಗಿಹಿಡಿದು ಕಿಚ್ಚಡಿ ಮಾಡಹತ್ತಿದಳು.

ಇಮಾಮಬೂವು, ಚಾಂದಬೂವು ದಿನದ ಊಟದಲ್ಲಿ ಬದಲು ಮಾಡಿದ್ದನ್ನು ಮನಗಂಡಳು. ಅಲ್ಲೀಭಾಯಿಗೂ ಇದು ತಿಳಿಯಿತು. ಅವನು ಒಂದು ದಿವಸ ಸೊಸೆಯನ್ನು ಕರೆದು—"ತಂಗೀ, ಚಾಂದಬೂವು ಈಗ ಮಿಠಾಯಿ ತಿನ್ನುವಳೋ?" ಎಂದು ಕೇಳಿದನು. ಇಮಾಮಬೂವು ಮಾವನ ಮಾತಿನ ಹೊಲಬು ತಿಳಿದು ನಾಚಿ ತಲೆ ಬಗ್ಗಿಸಿದಳು. ಅಲ್ಲೀಭಾಯಿಯ ಈ ಉಪಾಯವು ಇಮಾಮಬೂವಿಗೆ ಬಾಯಿಸವಿ ತಿನ್ನಬಾರದೆಂಬದನ್ನೂ ಚಾಂದಬೂವಿಗೆ ಕೈ ಬಿಗಿಹಿಡಿದು ವೆಚ್ಚ ಮಾಡುವದನ್ನೂ ಕಲಿಸಿತು.

---

## ೧೭ನೆಯ ಪಾಠ.

## ಸೋಮಾರಿತನ.

ರಾಗ—ಹಿಂದುಸ್ತಾನಿ ಕಾಪೀ. ರೂಪಕತಾಳ

ಸೋಮಾರಿತನವೆ ನೀನು ಎನ್ನನೇಕೆ ಕಾಡುವೆ ‖
ಭೀಮಾರಿ ಮಾಡಿ ನನಗೆ ಹಾನಿಯನ್ನು ನೀಡುವೆ ‖ ಪಲ್ಲ ‖

ಮಂದಿ ನನ್ನ ಕೆಲಸಗೆಡಿಸೆ ಸಿಟ್ಟು ತಡೆಯದು ॥
ಮುಂದೆ ನೀನು ಬರಲು ನನ್ನ ಆಟ ನಡೆಯದು ॥ ೧ ॥

ಅರಸಿನಾಜ್ಞೆ ಕ್ರೂರವೆಂದು ಮೀರಬಲ್ಲೆನು ॥
ಹೊರಿಸಿ ನಿನ್ನ ಮೇಲೆ ತಪ್ಪು ಕೂಡ್ರಲೊಲ್ಲೆನು ॥ ೨ ॥

ಹಿರಿಯಸೋಮಾರಿತನವೆ ನೀನೆ ಶೂರನು ॥
ಮುರಿಯಲಾರ ನಿನ್ನ ಆಜ್ಞೆ ಎಂಥ ವೀರನೂ ॥ ೩ ॥

ಓದುಬರಹದಲ್ಲಿ ಹಣವ ಗಳಿಸುವಲ್ಲಿಯೂ ॥
ಸಾಧು ಜನರ ಭಜನೆಯಲ್ಲಿ ಕಾದುಕೊಂಡಿಯೋ ॥ ೪ ॥

ಜ್ಞಾನ ಭಕ್ತಿ ಮೈತ್ರಿ ಕೀರ್ತಿ ಗಳಿಸ ಹೋಗಲು ॥
ನೀನು ರೂಪುಗೊಂಡು ಬಂದು ವಿಘ್ನವಾಗಲು ॥ ೫ ॥

ಯಾವ ನಿನ್ನ ಕತ್ತು ಪಿಡಿದು ಹಿಂದೆ ದೂಡುವಾ ॥
ಜೀವದಾನ ನೀಡು ಸಾಕು ಮುಂದೆ ನೋಡುವಾ ॥ ೬ ॥

"ಅಲಸಿ ಹೊಲಸಿ" ಎಂಬ ಪದವಿ ನನಗೆ ಕೊಟ್ಟೆಯೋ ॥
ಕಲಿಸಿ ಮೈಗಳ್ಳತನವ ದಬ್ಬಿಬಿಟ್ಟೆಯೋ ॥ ೭ ॥

ಮೊದಲು ತಿಳಿಯಗೊಡದೆ ಬೇನೆಯಂತೆ ಹೊಕ್ಕೆಯೋ ॥
ಹದವ ಕೆಡಿಸಿ ಬೆದರಿಸೆನ್ನ ಹಿಂದೆ ನಕ್ಕೆಯೋ ॥ ೮ ॥

ನಿನ್ನ ಗುಣವ ತಿಳಿದ ಜನರು ಹೆದರದಿರುವರೇ ॥
ಕನ್ನಗಾರನನ್ನು ಕಂಡು ಒದರದಿರುವರೇ ॥ ೯ ॥

ಉಂಡ ಮನೆಯ ಗಳಗಳೆಣಿಸೆ ನೀನೆ ಜಾಣನು ॥
ಬಂಡು ಮಾಡಿಬಿಡುವೆ ನಿನ್ನ ಮಿತ್ರಗಣವನು ॥ ೧೦ ॥

ಗಂಡರಲ್ಲಿ ಹೊಗಲು ನೀನು ಸಾಲ ತಪ್ಪದು ॥
ಹೆಂಡಿರಲ್ಲಿ ಸೇರೆ ಚಂಡಿತನವು ಬರ್ಪುದು ॥ ೧೧ ॥

ಹುಡುಗರಲ್ಲಿ ನೀನು ಹೋಗಲಡವಿಗೆಳಸುವೆ ॥
ಕಡೆಗೆ ಶರಣು ಸಾಕು ನಡೆಯೊ ನಿನ್ನ ಗೆಳೆತನ ॥ ೧೨ ॥
ಬುದ್ಧಿವಾದ ಕೇಳಿ ನಾನು ಎದ್ದು ಕೂತೆನು ॥
ಸದ್ದು ಇಲ್ಲದಂತೆ ಪೋಗು ಬಿಟ್ಟು ನನ್ನನು ॥ ೧೩ ॥

---

## ೧೮ನೆಯ ಪಾಠ.

## ದೇವರೂ ಆತನ ಸಾಮರ್ಥ್ಯವೂ.

ರಾಧೆ—ಮುದ್ದು ಮಕ್ಕಳೇ, ಸೃಷ್ಟಿಯಲ್ಲಿ ಒಂದು ತರದ ಶಕ್ತಿಯುಂಟು. ಆದರ ಮುಂದೆ ನಾವು ಹುಲ್ಲಿಗೆ ಸರಿ. ಆ ಶಕ್ತಿಯನ್ನು ನಾವು ವಶಮಾಡಿಕೊಳ್ಳಲಾರೆವು; ಅದು ನಮಗೆ ಕಾಣುವದೂ ಇಲ್ಲ, ತಿಳಿಯುವದೂ ಇಲ್ಲ. ಅಂಥ ಸಾಮರ್ಥ್ಯವು ನಮ್ಮಲ್ಲಿದ್ದರೆ ಮಳೆ-ಗಾಳಿ-ನೀರುಗಳನ್ನು ನಮ್ಮ ಕೈಯಲ್ಲಿಟ್ಟುಕೊಳ್ಳುತ್ತಿದ್ದೆವು. ಚೆನ್ನಾಗಿ ವಿಚಾರ ಮಾಡಿ ನೋಡಲು ಮಳೆ-ಗಾಳಿ-ನೀರು ಮುಂತಾದ ಎಲ್ಲ ಸೃಷ್ಟಿಕಾರ್ಯಗಳು ಯಾವದಾದರೊಂದು ಶಕ್ತಿಯ ಅಧೀನವಾಗಿರಬೇಕೆಂದು ಕಂಡುಬರುವದು. ನಾವು ನಮ್ಮ ಜ್ಞಾನೇಂದ್ರಿಯಗಳಿಂದ ಜಗತ್ತಿನ ಮೇಲಿರುವ ಪದಾರ್ಥಗಳ ಜ್ಞಾನವನ್ನು ಮಾಡಿಕೊಳ್ಳುತ್ತೇವೆ. ಆದರೆ ಹಿಂದೆ ಹೇಳಿದ ಅಸಂಖ್ಯವಾದ ಜಗತ್ತುಗಳ ವಿಷಯಕ್ಕೆ ನಮಗೆ ಬಹಳೇ ಸ್ವಲ್ಪ ಗೊತ್ತುಂಟು. ಎಲ್ಲ ಜಗತ್ತುಗಳ ಹುಟ್ಟುವಿಕೆಗೆ ಕಾರಣವಾದಂಥ ಎಲ್ಲ ತರದ ಶಕ್ತಿಗಳನ್ನು ಆಳುವಂಥ ಒಂದು ಶಕ್ತಿಯು ಇರಬೇಕೆಂದು ಅನಿಸುತ್ತದೆ. ಜಗಚ್ಚಾಲಕವಾದಂಥ ಅನಂತ ಮಹಿಮೆಯುಳ್ಳಂಥ ಈ ಶಕ್ತಿಗೆ ನಾವು ದೇವರೆನ್ನುವೆವು.

ಅನಸೂಯೆ—ಓಹೋ, ಹಾಗಾದರೆ ದೇವರು ಎಷ್ಟು ದೊಡ್ಡವನೂ ಎಂಥ ಮಹಿಮೆಯುಳ್ಳವನೂ ಇರಬೇಕು! ಅಕ್ಕನವರೇ, ದೇವರು ಎಂಥವನು? ಎಲ್ಲಿ ಇರುವನು?

ಅಕ್ಕ—ದೇವರನ್ನು ನಾವು ನೋಡಲಾರೆವು. ಆದರೆ ಅವನ ಪ್ರಭಾವ ದಿಂದಲೂ ಕಾರ್ಯಗಳಿಂದಲೂ ಅವನು ಇರುವನೆಂದು ಮನಗಂಡಿ ದ್ದೇವೆ. ದೇವರು ಇಡೀ ಜಗತ್ತಿನ ತುಂಬೆಲ್ಲಾ ಹಬ್ಬಿಕೊಂಡಿರುವನು. ಅವನು ಸರ್ವಶಕ್ತನೂ ಸರ್ವವ್ಯಾಪಿಯೂ ಎಂದೆನಿಸುವನು. ಜಗತ್ತಿ ನೊಳಗೆ ಸೃಷ್ಟಿಯ ವ್ಯಾಪಾರಗಳು ತಮ್ಮಷ್ಟಕ್ಕೆ ತಾವೇ ಆಗಲಿ, ಬೇಕು ಬೇಕಾದಂತೆಯಾಗಲಿ ಉಂಟಾಗಲಾರವು. ಇವೆಲ್ಲ ನಿಯಮಿತವಾಗಿ ನಡೆ ಯುತ್ತವೆ. ಈ ನಿಯಮಗಳೇ ದೇವರ ನಿಯಮಗಳು. ಸುಜ್ಞರು ಮಾಡಿ ದಂಥ ಕಟ್ಟಳೆಗಳು ಸದುದ್ದೇಶದಿಂದಲೇ ಮಾಡಿರುವವೆಂದು ನಮಗೆ ಗೊತ್ತುಂಟು. ಅದರಂತೆ ದೇವರ ನಿಯಮಗಳು ಕೂಡ ನಮಗೆ ಕಲ್ಯಾ ಣಕರವಾದಂಥವೂ ಜಾಣತನದಿಂದ ಮಾಡಿರುವಂಥವೂ ಇರುತ್ತವೆ.

ವೆಂಕು—ತಾಯಿಾ, ಆ ನಿಯಮಗಳು ಯಾವವು?

ಅಕ್ಕ—ಈ ನಿಯಮಗಳು ಎರಡು ತರದವು ಇರುವವು. ಜನನ ಮರಣ ಮಳೆ ಬೆಳೆ ಮುಂತಾದ ಸೃಷ್ಟ ವ್ಯಾಪಾರಗಳು ಮೊದಲನೆಯ ತರದ ನಿಯಮಗಳಂತೆ ನಡೆಯುವವು.

ನಾವು ಜಗತ್ತಿನಲ್ಲಿ ಹೇಗೆ ನಡೆದುಕೊಳ್ಳಬೇಕೆಂಬದನ್ನು ಕಲಿಸುವ ನಿಯಮಗಳು ಎರಡನೆಯ ಜಾತಿಯವು. ಸತ್ಯವಾಡಬೇಕು, ಬಡವರಲ್ಲಿ ದಯದೋರಬೇಕು, ಕಳವು ಮುಂತಾದ ಕೆಟ್ಟ ಕೆಲಸಗಳನ್ನು ಮಾಡಬಾ ರದು ಎಂಬಿವುಗಳು ಎರಡನೆಯ ತರದ ನಿಯಮಗಳು. ಜನರ ಸುಖವೂ ಕಲ್ಯಾಣವೂ ಇವುಗಳನ್ನೇ ಅವಲಂಬಿಸಿರುತ್ತವೆ. ಈ ನಿಯಮಗಳನ್ನು ನೋಡಲಾಗಿ ದೇವರು ನ್ಯಾಯವಂತನೂ ಕರುಣಾಳುವೂ ದಯೆಯುಳ್ಳ ವನೂ ಇರುವನೆಂದು ಗೊತ್ತಾಗುವದು. ದೇವರು ತನ್ನ ಈ ಎರಡೂ ತರದ ನಿಯಮಗಳನ್ನು ಸ್ವತಃ ತಾನೇ ಪಾಲಿಸುವನು. ಹಾಗೂ ಅವನ್ನು ನಾವು ಪಾಲಿಸಬೇಕೆಂಬ ಇಚ್ಛೆಯುಳ್ಳವನಾಗಿರುವನು. ಈ ಎರಡೂ ವಿಧವಾದ ನಿಯಮಗಳನ್ನು ಪಾಲಿಸುವದರಿಂದ ನಮಗೆ ಸುಖವೂ ಆರೋ

ಗ್ಯವೂ ಸಿಕ್ಕುವವು. ಇವುಗಳನ್ನು ಮೀರುವದರಿಂದ ನಾವು, ನಮ್ಮ ಕುಟುಂಬದವರು, ಒಂದು ವೇಳೆ ನಮ್ಮ ನೆರೆಹೊರೆಯುವರು ಕೂಡ ಕಷ್ಟ ಕ್ಕೊಳಗಾಗಬೇಕಾಗುವದು. ಈ ಜಗತ್ತಿನಲ್ಲಿ ಪೂರ್ಣ ಸುಖ ಸಿಗುವದು ಅಸಂಭವವೇ! ಆದರೂ ಈ ದೇವರ ನಿಯಮಗಳಿಗನುಸಾರವಾಗಿ ನಡೆ ದುಕೊಳ್ಳುವವರು ಅವುಗಳನ್ನು ಮೀರುವವರಿಗಿಂತ ಹೆಚ್ಚು ಸುಖವನ್ನು ತಾವು ಅನುಭವಿಸುವರಲ್ಲದೆ ಇತರರಿಗೂ ಸುಖ ಕೊಡುವರು. ಮುದ್ದು ಮಕ್ಕಳೇ, ದೇವರ ಮನಸ್ಸಿನ ವಿರುದ್ಧವಾಗಿ ನಡೆಯುವದು ಪಾಪವು. ಅವನ ನಿಯಮಗಳನ್ನು ಮೀರುವದರಿಂದ ಅವನ ಮನಸ್ಸಿಗೆ ಕೆಡಕೆನಿಸು ವದು. ಆದಕಾರಣ ನಾವು ಪಾಪ ಮಾಡಿದಂತಾಗುವದು. ದೇವರು ದಯಾವಂತನಿರುವದರಿಂದ ಅವನ ನಿಯಮಗಳನ್ನು ನಾವು ಮುರಿಯು ವದು ಸರಿಯಲ್ಲ. ಅವನ ಅನುಗ್ರಹವನ್ನು ಸಂಪಾದಿಸುವದಕ್ಕಾಗಿ ನಾವು ಅವನನ್ನು ದಿನಾಲು ಭಕ್ತಿಪೂರ್ವಕವಾಗಿ ಬೇಡಿಕೊಳ್ಳತಕ್ಕದ್ದು.

---

### ೧೯ನೆಯ ಪಾಠ.

## ಅಫೀಮಿನ ಉಪಯೋಗದಿಂದಾಗುವ ದುಷ್ಪರಿಣಾಮಗಳು.

ಅಫೀಮು ಒಂದು ಮಾದಕ ಪದಾರ್ಥವು. ಇದರಿಂದ ಶರೀರದ ಬೇರೆ ಬೇರೆ ಇಂದ್ರಿಯಗಳ ಮೇಲೆ ಕೆಟ್ಟಪರಿಣಾಮವಾಗುವದು. ಇದನ್ನು ಸ್ವಲ್ಪ ಪ್ರಮಾಣದಂತೆ ತೆಗೆದುಕೊಂಡರೆ ಮೊದಮೊದಲು ಶರೀರಕ್ಕೆ ಅಪಾಯವಾದಂತೆ ಕಂಡುಬರುವದಿಲ್ಲ. ಆದರೆ ಒಂದೇಸವನೆ ಅದನ್ನು ಸೇವಿಸುತ್ತ ಹೋದರೆ ಅದರಿಂದ ಶರೀರದ ಎಲ್ಲ ಇಂದ್ರಿಯಗಳ ಮೇಲೆ ಕ್ರಮವಾಗಿ ಒಂದು ಪ್ರಕಾರದ ಪರಿಣಾಮವಾಗುವದು. ಮತ್ತು ಕಟ್ಟ ಕಡೆಗೆ ಇಡೀ ಶರೀರವು ಸುಂದಾಗಿ ಬಲಹೀನವಾಗಿಹೋಗುವದು. ಅಫೀ ಮಿನ ವ್ಯಸನಕ್ಕೆ ಬಿದ್ದ ಮನುಷ್ಯನಿಗೆ ಅದು ಇಲ್ಲದಿದ್ದರೆ ಬಹಳ ತ್ರಾಸ ವಾಗುವದು. ಮತ್ತು ಅದು ಸಿಗುವವರೆಗೆ ಖಿನ್ನನಾಗಿ ಅಸಮಾಧಾನದಿಂದ

ಹುಚ್ಚನಂತಾಗುವನು. ಅಫೀಮನ್ನು ಹೆಚ್ಚು ತೆಗೆದುಕೊಂಡರೆ ಮರಣವು ಬರುವದು. ಆದ್ದರಿಂದ ಅಫೀಮನ್ನು ಎಂದೂ ಉಪಯೋಗಿಸದೆ ಇರುವದೇ ಉತ್ತಮ ಮಾರ್ಗವು.

ಹಿಂದಕ್ಕೆ ನಮ್ಮ ದೇಶದಲ್ಲಿ (ಉತ್ತರ ಹಿಂದುಸ್ತಾನದಲ್ಲಿ) ಅಫೀಮನ್ನು ಬಹಳವಾಗಿ ಉಪಯೋಗಿಸುತ್ತಿದ್ದರು. ದೊಡ್ಡ ದರಬಾರುಗಳಲ್ಲಿಯೂ ಹತ್ತೆಂಟು ಜನರು ಕೂಡುವ ಸಾರ್ವಜನಿಕ ಇಲ್ಲವೆ ಇತರ ಸಮಾರಂಭಗಳಲ್ಲಿಯೂ ನೆರೆದವರಿಗೆಲ್ಲ ಅಫೀಮಿನ ಪಾನಕವನ್ನು ಕೊಡುವ ರೂಢಿಯು ಇದ್ದಿತು. ಹೀಗೆ ಅಫೀಮಿನ ಪಾನಕವನ್ನು ಕುಡಿಯುವದರಿಂದ ಜನರಿಗೆ ಕ್ರಮಕ್ರಮವಾಗಿ ಅಫೀಮಿನ ವ್ಯಸನವೇ ಹತ್ತುತ್ತಿತ್ತು. ಮತ್ತು ಅದು ಸಾಯುವ ವರೆಗೂ ಹೋಗುತ್ತಿದ್ದಿಲ್ಲ. ಇತ್ತಿತ್ತಲಾಗಿ ಅಂಥ ಸಮಾರಂಭಗಳಲ್ಲಿ ಅಫೀಮನ್ನು ಉಪಯೋಗಿಸುವ ರೂಢಿಯು ತೀರ ಕಡಿಮೆಯಾಗಿದೆ.

ಮುಪ್ಪಿನ ಕಾಲದಲ್ಲಿ ಉತ್ಸಾಹವು ಸಾಮಾನ್ಯವಾಗಿ ಕಡಿಮೆಯಿರುವದರಿಂದ ಮುಪ್ಪಿನವರು ತಮಗೆ ಉತ್ಸಾಹವುಂಟಾಗಬೇಕೆಂದು ಅಫೀಮು ತಿನ್ನುವದುಂಟು. ಆದರೆ ಅಫೀಮಿನಿಂದ ಉಂಟಾದ ಉತ್ಸಾಹವು ಕ್ಷಣಿಕವಾಗಿರುವದಲ್ಲದೆ ಬಹಳ ಹೊತ್ತು ಉಳಿಯುವದಿಲ್ಲ. ಮತ್ತು ಅದು ಮಿದುಳಿನ ಮೇಲೆಯೂ ರಕ್ತಾಶಯದ ಮೇಲೆಯೂ ಘಾತಕ ಪರಿಣಾಮವನ್ನುಂಟುಮಾಡುವದು. ಅಫೀಮಿನಿಂದ ಮಜ್ಜಾತಂತುಗಳು ಸುಂದಾಗುವವಲ್ಲದೆ ಕರುಳುಗಳ ಮೇಲೆಯೂ ಕೆಟ್ಟ ಪರಿಣಾಮವಾಗುವದು. ಆದ್ದರಿಂದ ಅಫೀಮಿನ ವ್ಯಸನದಿಂದ ದೂರ ಇರುವದೇ ಉತ್ತಮ ಸಂಗತಿಯು.

ನಮ್ಮ ದೇಶದಲ್ಲಿ ಕೆಲವು ತಿಳಿಗೇಡಿ ಹೆಂಗಸರು ಕೂಸುಗಳಿಗೆ ಹೆಚ್ಚು ಅಫೀಮು ಕೂಡಿಸಿದ ಬಾಲಗುಟಿಕೆಗಳನ್ನು ತಿನ್ನಿಸುವರು. ಈ ಗುಳಿಗೆಗಳಿಂದ ಕೂಸುಗಳಿಗೆ ನಿದ್ದೆ ಹತ್ತಿ ಅವು ಮಲಗಿಕೊಳ್ಳುವದೇನೋ ನಿಜ. ಆದರೆ ಅದರಲ್ಲಿರುವ ಅಫೀಮಿನಿಂದ ಅವುಗಳಿಗೆ ಅಪಾಯವಾಗದೆ

ಇರದು. ಎಷ್ಟೋ ಸಾರೆ ಹೆಚ್ಚು ಅಫೀಮು ಬಿದ್ದು ಬಾಲಕರು ಅಕಾಲ ದಲ್ಲಿ ಸಾಯುವರು. ಆದ್ದರಿಂದ ತಾಯಂದಿರು ತಮ್ಮ ಮಕ್ಕಳಿಗೆ ಇಂಥ ಬಾಲಗುಟಿಕೆಗಳನ್ನಾಗಲಿ, ಅಫೀಮು ಕೂಡಿದ ಔಷಧವನ್ನಾಗಲಿ ಯಾವದೇ ರೀತಿಯಿಂದ ಉಪಯೋಗಿಸದಂತೆ ಎಚ್ಚರಪಡಬೇಕು. ಸುಧಾರಿಸಿದ ದೇಶಗಳ ಹೆಣ್ಣುಮಕ್ಕಳಿಗೆ ಹೀಗೆ ಅಫೀಮನ್ನು ಉಪಯೋಗಿಸುವದು ಗೊತ್ತಿರುವದಿಲ್ಲ. ಮತ್ತು ನಮ್ಮ ದೇಶದಲ್ಲಿಯ ಮುಂದುವರಿದ ಜಾತಿಯ ಹೆಣ್ಣುಮಕ್ಕಳಾದರೂ ಅದನ್ನು ಉಪಯೋಗಿಸುವದಿಲ್ಲ. ಆದರೆ ಹಿಂದುಳಿದ ಕೂಲಿಯ ಹೆಂಗಸರು ಇದನ್ನು ಬೇಕಾದ ಹಾಗೆ ಉಪಯೋಗಿಸುವರು. ತಮ್ಮ ಕೂಸುಗಳು ಗಡದ್ದಾಗಿ ನಿದ್ದೆ ಹೋಗಿ ತಮ್ಮ ಕೆಲಸಕ್ಕೆ ತೊಂದರೆ ಕೊಡಬಾರದೆಂದು ತಿಳಿದು ಅವರು ಅಫೀಮನ್ನು ತಮ್ಮ ಶಿಶುಗಳಿಗೆ ಹಾಕುವರು. ಈ ತಿಳುವಳಿಕೆಯು ಬಹಳ ತಪ್ಪಾಗಿರುವದು. ಅಫೀಮಿನ ಗುಟ್ಟಿಯಿಂದ ಹತ್ತಿದ ನಿದ್ದೆಯು ಬಹಳ ಹೊತ್ತು ಉಳಿಯಲಾರದು. ತುಸು ಹೊತ್ತಿನ ಮೇಲೆ ಅವು ಎಚ್ಚತ್ತ ಕೂಡಲೆ ಖಿನ್ನವಾಗಿ ಅಸಮಾಧಾನದಿಂದ ಅಳಹತ್ತುವವು. ಮತ್ತು ಅದರಿಂದ ಅವುಗಳಿಗೆ ಅಪಾಯವಾಗದೆ ಇರದು. ಚಿಕ್ಕಮಕ್ಕಳ ಸಂಗೋಪನವನ್ನು ಸರಿಯಾಗಿ ಮಾಡಬೇಕಾದರೆ ಅವುಗಳನ್ನು ತಪ್ಪದೆ ಎರೆದು, ಒಗೆದ ಬಟ್ಟೆಗಳನ್ನು ಹಾಕಿ, ಹೊಟ್ಟೆಗೆ ಕೊಟ್ಟು ಮಲಗಿಸಿದರೆ ಅವು ಸ್ವಾಭಾವಿಕವಾಗಿ ಗಾಢನಿದ್ದೆಮಾಡುವವು.

ಮೊದಲು ನಮ್ಮ ದೇಶದ ಬೇರೆ ಬೇರೆ ಭಾಗಗಳಲ್ಲಿ ಅಫೀಮಿನ ಗಿಡಗಳನ್ನು ಬೆಳೆಯಿಸುತ್ತಿದ್ದರು. ಆದರೆ ಅಫೀಮಿನಿಂದಾಗುವ ದುಷ್ಪರಿಣಾಮಗಳನ್ನು ತಿಳಿದು ಸರಕಾರದವರು ಅವುಗಳನ್ನು ಮಾಳವಾ ಮುಂತಾದ ವಿವಕ್ಷಿತಪ್ರದೇಶಗಳಲ್ಲಿ ಮಾತ್ರ ಬೆಳೆಯಿಸಬೇಕೆಂದು ನಿರ್ಣಯಿಸಿದ್ದಾರೆ. ಮತ್ತು ಅಫೀಮು ಅಲ್ಲಿಂದ ಬೇರೆ ಕಡೆಗೆ ಹೋಗುವಾಗ ತಕ್ಕ ಮೇಲ್ವಿಚಾರಣೆಯನ್ನಿಡುವರು. ಅಫೀಮು ವಿಷಕಾರಕ-

ಪದಾರ್ಥವಾಗಿರುವದರಿಂದ ಅದನ್ನು ಬೇಕಾದ ಹಾಗೆ ಪೇಟೆಯಲ್ಲಿ ಮಾರು ತ್ತಿರುವದಿಲ್ಲ. ಕೆಲವೊಂದು ಅಂಗಡಿಕಾರರು ಮಾತ್ರ ಸರಕಾರದ ವಿಶಿಷ್ಟ ಪ್ರಕಾರದ ಅಪ್ಪಣೆಯನ್ನು ಪಡೆದುಕೊಂಡು ಅಫೀಮು ಮಾರುವರು. ಸರ ಕಾರದ ಅಪ್ಪಣೆಯನ್ನು ಪಡೆದುಕೊಳ್ಳದೆ ಯಾವ ಅಂಗಡಿಕಾರನೂ ಅಫೀಮು ಮಾರಲಾಗದು. ಮತ್ತು ಒಂದು ಸರತಿಗೆ ಒಂದು ತೊಲೆಗಿಂತ ಹೆಚ್ಚಿಗೆ ಅಫೀಮನ್ನು ಯಾರಿಗೂ ಮಾರಕೂಡದು.

---

## ೨೦ನೆಯ ಪಾಠ.

## ಚಿಕ್ಕ ಹೆಣ್ಣುಮಕ್ಕಳಿಗೆ ಉಪದೇಶವು.

ಭಾಮಿನೀಷಟ್ಪದಿ.

ಗೆಳತಿ ಕೇಳ್ವಾಂ ಪೇಳ್ವ ನೀತಿಯಿ- ।
ನೊಳಿತಹುದು ನಿಶ್ಚಯವು ನೀನದ- ।
ನೆಳುಕದಲೆ ನಡೆಯಿಸಲು ಬೇಕೌ ಕಾಲಕಾಲದಲಿ ॥
ಬೆಳಗಿನೊಳು ಬೇಗೆದ್ದು ಮನದಲಿ ।
ತೊಳಗುತಿಹ ಪರಮಾತ್ಮನಂಘ್ರಿಯ- ।
ನೊಲಿದು ನೆನೆಯುತಲನ್ಯಕಾರ್ಯವ ಗೈಯತೊಡಗುವದು ॥ ೧ ॥

ಮಿಂದು ಮಡಿಯುಡುವದರಿನೆಮ್ಮಯ ।
ಚಂದವಾಗಿಹ ತನುವು ಕಂದದು ।
ಬಂದು ಸೇರವು ದುಷ್ಟ ಬೇನೆಗಳೆದರಿನಾವಗಮುಂ ॥
ಒಂದೆ ಮನದಲಿ ಸಂದ ಕಾರ್ಯವ ।
ನಂದದಿಂ ಮಾಡುತ್ತ ಸೌಖ್ಯವ ।
ಹೊಂದುವದಕನುಕೂಲವಹುದಾ! ಕೇಳು ಮೈತ್ರಿಣಿಯೇ ॥ ೨ ॥

ತಂದೆತಾಯ್ಗಳ ನುಡಿಯ ನಡೆಸುತ ।
ವಂದಿಸುತ ಗುರುಹಿರಿಯರನು ತಾಂ ।
ಹೊಂದುತಲಿ ಸಚ್ಛೀಲವನು ಸತ್ಯವನು ನುಡಿಯುತಲಿ ॥
ಎಂದಿಗೂ ಸವಿ ನುಡಿಯ ನುಡಿಯುತೆ ।
ಸಂದ ಸೂರ್ಯೋದಯದ ಕಾಲದ- ।
ಲೊಂದೆ ಮನದಿಂದೋದುತಿರುವದು ತಮ್ಮ ಪಾಠಗಳ ॥ ೩ ॥

ಎಳೆಯತನದಲಿ ಕಲಿಯೆ ವಿದ್ಯೆಯು ।
ಒಲಿದು ಬರ್ಪುದು ಬಳಿಕ ಬಾರದು ।
ಕಳೆದ ಕಾಲವು ತಿರುಗಿ ಬಾರದು ಸಕಲ ಯತ್ನಗಳಿಂ ॥
ಗೆಳೆತನವ ಮಾಡುವದು ಸುಜನರ ।
ಕಳೆದುಬಿಡುವದು ದುಷ್ಟ ಸಖಿಯರ ।
ಗೆಳೆತನವೆ ಕಾರಣವು ಮನುಜರ ಸುಗುಣದುರ್ಗುಣಕೆ ॥ ೪ ॥

ಮನವ ತನುವನು ತಕ್ಕ ನಿಯಮದಿ ।
ಜನರು ನಡೆಯಿಸೆ ಬೆಳೆವವದರಿಂ ।
ದಿನುಸಮದ ಸುಖದುಃಖವನು ಸಮವೆಣಿಸಿ ಸೌಖ್ಯದಲಿ ॥
ಅನವರತ ತಾವಿಹರು ನಿಶ್ಚಯ ।
ಮನದೆ ಕೇಳಿ ಹಿತೋಪದೇಶವ ।
ಘನದ ಶೀಲದಿ ನಡೆದು ಪಡೆವುದು ಸೌಖ್ಯವಿಹಪರದೆ ॥ ೫ ॥

---

### ೨೧ನೆಯ ಪಾಠ.

## ಧೈರ್ಯವುಳ್ಳ ಹೆಂಗಸು.

ಮಳೆಯಿಂದ ತುಂಬಿ ಹರಿಯುವ ಚಿಕ್ಕ ಹಳ್ಳವನ್ನು ದಾಟುವದು ಬಿಗಿ. ದೊಡ್ಡ ಹೊಳೆಯಲ್ಲಿದ್ದಂತೆ ಅದನ್ನು ದಾಟುವದಕ್ಕೆ ಹರಗೋಲು

ಇರುವದಿಲ್ಲ. ಇಂಥ ಹಳ್ಳವನ್ನು ಜನರು ಸಿಂಗಡಿಯ ಸಹಾಯದಿಂದ ಇಲ್ಲವೆ ಹರಿವೆಯ ಸಹಾಯದಿಂದ ದಾಟುವದುಂಟು. ಈಸಲಿಕ್ಕೆ ಬಾರದವರಿಗಂತೂ ಹಳ್ಳಾ ದಾಟುವದು ಬಹಳೇ ಕಠಿಣವು. ದಾಟುವಾಗ ಸಿಂಗಡಿಯು ಕೈತಪ್ಪಿಹೋದರೆ ಅಥವಾ ಹರಿವೆಯು ಯಾತಕ್ಕಾದರೂ ಬಡಿದು ಒಡೆದರೆ, ಇವರ ಕಥೆಯೇ ಮುಗಿಯುವದು.

ಒಮ್ಮೆ ವರದಾ ಹೊಳೆಗೆ ಮಹಾಪೂರವು ಬಂದಿತ್ತು. ಆಗ ಆ ಹೊಳೆಯು ಹೊರಚಲ್ಲಿ ಹರಿಯುತ್ತಿತ್ತು. ಒಬ್ಬ ಹೆಣ್ಣುಮಗಳು ಅದನ್ನು ದಾಟಬೇಕಾಗಿತ್ತು. ಆಕೆಗೆ ಆರು ವರ್ಷದ ಒಬ್ಬ ಮಗಳಿದ್ದಳು. ಅವಳು ಅಂಬಿಗನಿಗೆ ಹೊಳೆ ದಾಟಸೆಂದು ಹೇಳಿದಳು. ಅಲ್ಲಿಯೇ ಒಂದು ಬಂಡೆಗಲ್ಲಿನ ಮಗ್ಗಲಿಗೆ ಒಂದು ದೊಡ್ಡ ಹರಿವೆಯನ್ನು ಡಬ್ಬು ಹಾಕಿ ಇಟ್ಟಿತ್ತು. ಅವನು ಅದನ್ನು ತಂದು ಅವಳ ಮುಂದಿಟ್ಟನು. ಅವಳ ಹತ್ತರ ಉಡು ತೊಡುವ ಅರಿವೆಗಳ ಗಂಟಿತ್ತು. ಅದನ್ನು ಬಿಚ್ಚಿ ಒಂದೊಂದೇ ಅರಿವೆಯನ್ನು ಹರಿವೆಯಲ್ಲಿ ತುರುಕಿದಳು. ಮೊಳಕಾಲಮಟ್ಟ ನೀರಿನಲ್ಲಿ ನಿಂತು ಹುಡುಗೆಯನ್ನು ಆ ಹರಿವೆಯ ಬಾಯ ಮೇಲೆ ಕೂಡ್ರಿಸಿ, ತಾನೊಂದು ಕಡೆ ಅಂಬಿಗನೊಂದು ಕಡೆ ಆ ಹರಿವೆಯ ಕಂಟವನ್ನು ಹಿಡಿದು ನಡೆದರು.

ಅಂಬಿಗನು—ತಾಯಿ, ಕೈಯಿಂದ ಹರಿವೆಯ ಕಂಟವನ್ನು ಮಾತ್ರ ಗಟ್ಟಿಯಾಗಿ ಹಿಡಿದಿರು; ಬಿಡಬೇಡವೆಂದೂ, ಹೊಟ್ಟೆಯನ್ನು ಯಾವಾಗಲೂ ಹರಿವೆಯ ಮಗ್ಗಲಿಗೆ ಹೊಂದಿಸಿರು ಎಂದೂ, ನೀರಲ್ಲಿ ಕಾಲುಗಳನ್ನು ಚಾಚಿ ಬಿಡು ಎಂದೂ ಹೇಳಿದನು.

ಅಂಬಿಗನು ಹೇಳಿದಂತೆ ಆ ಹೆಣ್ಣುಮಗಳು ಮಾಡಿದಳು. ಅವಳಿಗೆ ಹರಿವೆ ಹಿಡಿದು ಹೊಳೆ ದಾಟುವದೊಂದು ಆಟವೆನಿಸಿತು. ಪ್ರವಾಹಕ್ಕೆ ಸೆಳವು ಬಹಳವಿತ್ತು. ಅಲ್ಲಲ್ಲಿ ನೀರು ಸುಳಿಗಟ್ಟುತ್ತಿತ್ತು. ಹೊಳೆಯು ಹೊರಚಲ್ಲಿ ಹರಿಯುತ್ತಿರುವದರಿಂದ ಪಾತ್ರವು ಬಹಳ ಅಗಲವಾಗಿತ್ತು. ಹರಿವೆಯ ಮೇಲೆ ಕುಳಿತು ಆ ಹುಡುಗೆಯು ಹೊಳೆಯೊಳಗಿನ ತೆರೆ

ಗಳನ್ನು ನೋಡಿ ಹಿಗ್ಗುತ್ತಿತ್ತು. ನಡುಹೊಳೆಗೆ ಬರುವ ವರೆಗೆ ಅವರಿಗೇನೂ ಗಂಡಾಂತರ ಒದಗಲಿಲ್ಲ. ಅಷ್ಟರಲ್ಲಿ ಆ ಹೆಣ್ಣುಮಗಳ ದೃಷ್ಟಿಯು ಹರಿವೆಯ ಬಾಯ ಕಡೆಗೆ ಹೋಯಿತು. ಆಗ ಒಂದು ಹಾವು ಹರಿವೆಯ ಬಾಯಿಯೊಳಗಿಂದ ಹೊರಗೆ ತಲೆ ಹಾಕಿಕೊಂಡು ನಿಂತದ್ದನ್ನು ನೋಡಿದಳು. ಆಗ ಅವಳೇನು ಮಾಡತಕ್ಕದ್ದು? ತನ್ನನ್ನಾಗಲಿ ಹುಡುಗೆಯನ್ನಾಗಲಿ ಈ ಹಾವು ಕಡಿಯುವದೆಂದು ಆಕೆ ಬಗೆದಳು. ಅಳ್ಳೆದೆಯ ಹೆಣ್ಣುಮಗಳಾಗಿದ್ದರೆ ಹಾವು ಕಂಡು ಅಂಜಿ ಹರಿವೆಯನ್ನು ಬಿಟ್ಟುಬಿಡುತ್ತಿದ್ದಳು. ಹರಿವೆಯನ್ನು ಬಿಟ್ಟದ್ದರೆ, ಒತ್ತಟ್ಟಗೆ ಭಾರ ಬಿದ್ದು ಅದು ಬೋರಲು ಬೀಳುತ್ತಿತ್ತು. ಹೀಗಾಗಲು ತಾಯಿಯೂ ಮಗಳೂ ಕೂಡೇ ಸತ್ತು ಹೋಗುತ್ತಿದ್ದರು.

ಆದರೆ ನಮ್ಮ ಈ ಹೆಣ್ಣುಮಗಳು ಧೈರ್ಯವಂತೆಯು. ಅವಳು ಬೇಗನೆ ಆ ಹಾವಿನ ಹೆಡೆಯನ್ನು ಗಬಕ್ಕನೆ ಹಿಡಿದು ಒಳ್ಳೆಯ ಕಸುವಿನಿಂದ ಹಿಚುಕಿದಳು. ಅದರಿಂದ ಹಾವಿನ ಆಟ ಸಾಗಲಿಲ್ಲ. ಇತ್ತ ಅಂಬಿಗನು ಆದಷ್ಟು ಒತ್ತರದಿಂದ ಹರಿವೆಯನ್ನು ನಡೆಸಿದ್ದನು. ಹಿಡಿಕೆಯಲ್ಲಿ ಸಿಕ್ಕ ಹಾವು ಪಾರಾಗಬೇಕೆಂದು ವಿಶ್ವಪ್ರಯತ್ನ ಮಾಡುವದು ಸಹಜವು. ಆ ಹಾವಿನ ಮೈ ಒಳ್ಳೆಯ ನುಣುಪಾಗಿರುವದರಿಂದ ಮೆಲ್ಲನೆ ಕೈಯೊಳಗಿಂದ ನುಸುಳುತ್ತ ತುಸು ತುಸು ಹೊರಬೀಳಹತ್ತಿತು. ಕಡೆಗೆ ಹೆಡೆಯನ್ನು ಬಗ್ಗಿಸಿ ಆಕೆಯನ್ನು ಕಡಿಯಲಿಕ್ಕೆ ಹವಣಿಸತೊಡಗಿತು. ಈಗ ಮಾತ್ರ ಆ ಹೆಣ್ಣುಮಗಳು ತುಸು ಹೆದರಿದಳು; ಆದರೆ ಧೈರ್ಯವನ್ನು ಬಿಡಲಿಲ್ಲ. ಸ್ವಲ್ಪ ಹೊತ್ತು ವಿಚಾರ ಮಾಡಿ ಅವಳು ಅದನ್ನು ಕಸುವಿನಿಂದ ಹೊರಗೆ ಹಿರಿದು ನೀರಲ್ಲಿ ಚಲ್ಲಿಬಿಟ್ಟಳು. ಈ ಕೆಲಸ ಮಾಡುವಾಗ ಆಕೆಯ ಕೈಯು ಹರಿವೆಯನ್ನು ಬಿಟ್ಟಿತ್ತು. ಅದರಿಂದ ಅವಳೂ ನೀರಲ್ಲಿ ಬಿದ್ದಳು, ಆ ಹುಡುಗೆಯೂ ಮುಣುಗುವ ಪ್ರಸಂಗವಿತ್ತು. ಆದರೆ ದೇವರ ದಯದಿಂದ ದಂಡೆಯ ತೀರ ಸಮೀಪಕ್ಕೆ ಅವರು ಬಂದಿದ್ದರು. ಅಲ್ಲಿ ನೀರು ಎದೆ

ಮಟ್ಟವೇ ಇದ್ದದರಿಂದ ಆ ಹೆಂಗಸು ಪಾರಾದಳು. ಮತ್ತು ಆ ಅಂಬಿಗನು ಆ ಹುಡುಗೆಯನ್ನು ಎತ್ತಿ ಹಿಡಿದನು.

ಒಂದು ಬಂಡೆಗಲ್ಲಿನ ಬಳಿಯಲ್ಲಿ ಆ ಹರಿವೆಯನ್ನು ಅರ್ಧ ಡಬ್ಬ ವಿಟ್ಟಿತ್ತೆಂದು ಮೊದಲೇ ಹೇಳಿದ್ದೇವೆ. ಮಳೆಗೂ ಚಳಿಗೂ ಅಂಜಿ ಒಂದು ಹಾವು ಅದರಲ್ಲಿ ಸೇರಿ, ಅಡಗಿಕೊಂಡು ಕುಳಿತಿತ್ತು. ಆ ಮೇಲೆ ಅದರಲ್ಲಿ ಅರಿವೆಗಳನ್ನು ತುಂಬಿ, ಅದರ ಮೇಲೆ ಆ ಹುಡುಗೆಯನ್ನು ಕೂಡ್ರಿಸಿದ್ದರಿಂದ ಆ ಹಾವಿಗೆ ಕೂಡಲೇ ಹೊರಗೆ ಬರಲಿಕ್ಕಾಗಲಿಲ್ಲ. ಆಹಾ! ನೋಡಿರಿ ಅವಳು ಎಂಥ ಎದೆಗಾರ್ತಿಯು!

---

## ೨೨ನೆಯ ಪಾಠ.

## ಹೊಳೆ.

ರಾ—ಸಾವೇರಿ. ತಾ—ಆದಿ

ನೋಡು ನೋಡಕ್ಕ ಏಂ ರಮಣೀಯವು।
ನೋಡು ನೋಡೀ ನದಿಯ ಸೌಭಾಗ್ಯವು ॥ ಪಲ್ಲ ॥

ಗಿರಿಝುರಿಗಳೊಳು ಪುಟ್ಟಿ। ಗಿರಿದರಿಗಳೊಳು ತೊಳಲಿ।
ಧರಣಿಗುಪಕಾರ ಮಾಡಲ್ಪರಿವುದೌ ॥ ಅನುಪಲ್ಲ ॥

ನಿರುಮಲದ ನೀರಿನಿಂ ಹಿರಿಕಿರಿಯ ತೆರೆಗಳಿಂ।
ಮಿರುಗುತಿಹ ನೊರೆಬುರುಗಿನಿಂ ಸುಳಿಗಳಿಂ ॥ ೧ ॥

ಡೊಂಕುಡೊಂಕಾಗಿ ಹರಿವುದು ತಾನು ಹಾವಲ್ಲ।
ಶಂಖಚಕ್ರಗಳೆದ್ದು ಹರಿಯಲ್ಲವು ॥ ೨ ॥

ಜಳಕ ಮಾಳ್ಪರು ಕೆಲರು ಕೆಲರೀಸುಗೆಲಿಯುವರು।
ನಲಿನಲಿದು ಕೆಲವರೀಸಾಡುತಿಹರು ॥ ೩ ॥

ಕೆಲರೀಸುಗಾಯ್ಗಳಿಂ ಕೆಲರು ತೆಪ್ಪಗಳಿಂದ ।
ಕೆಲರು ಹರಿಗೋಲಿನಿಂ ದಾಂಟುತಿಹರು ॥ ೪ ॥

ನೀರಿನೊಳು ತರತರದ ವಿಮಾನಗಳು ಚರಿಸುವವು ।
ಕ್ರೂರ ಮೊಸಳೆಗಳವಕೆ ಹವಣಿಸುವವು ॥ ೫ ॥

ಧರಣಿಯೊಳು ಸ್ವಾರ್ಥಪರ ದುರುಳರೀ ಮೊಸಳೆವೊಲ್ ।
ಅರಿಯರನ್ನಿಗರ ಸಂಕಟಗಳನ್ನು ॥ ೬ ॥

ಬಗೆಬಗೆಯ ಬಣ್ಣಗಳ ಮೀಘಗಳ ಪಡಿನೆಳಲ ।
ಬಗೆಯ ನೋಡಾ ನೀರೊಳೆಷ್ಟೆಂದವು ॥ ೭ ॥

ತೀರದೊಳ್ ಬೆಳೆದ ಬನ ನೀರುಂಡು ಫಲಗೊಂಡು ।
ಧಾರುಣಿಯ ತಣಿಪಲ್ಕೆ ನಿಂತಿರುವವು ॥ ೮ ॥

ಕಲಕಲಧ್ವನಿಗೈಯುತಲ್ಲಿರ್ದ ಹಕ್ಕಿಗಳು ।
ಹೊಳೆಯ ದಂಡೆಯ ಹಿಡಿದು ಹಾರುತಿಹವು ॥ ೯ ॥

ಉಸುರಲೇನಿಳೆಯ ತನ್ನಮಳ ಜಳದಿಂದ ಸಂ- ।
ತಸಗೊಳಿಸುವಿದರ ಧನ್ಯತೆಯದೆಷ್ಟೊ ॥ ೧೦ ॥

ಪರಿಯುತಿಳಕಲದೆ ಕಡಲೊಡೆಯನಂತ್ಯದೆ ಕೂಡಿ ।
ಬೆರೆವುದಾ ಗೌರೀಶನಾಜ್ಞೆಯಿಂದಂ ॥ ೧೧ ॥

---

### ೨೩ನೆಯ ಪಾಠ.

## ವಿಜಾಪುರದ ಕೋಟೆ.

ಈ ದೇಶದ ಅರ್ವಾಚೀನ ಕಾಲದ ಇತಿಹಾಸದಲ್ಲಿ ವಿಜಾಪುರ ಪಟ್ಟಣವು ಬಹಳ ಹೆಸರಾಗಿರುವದು. ಇದು ಸುಮಾರು ಇನ್ನೂರು ವರ್ಷಗಳ ವರೆಗೆ ಆದಿಲ್‌ಶಾಹಿಯ ರಾಜಧಾನಿಯಿತ್ತು. ಆ ಕಾಲದಲ್ಲಿ

ಇದಕ್ಕೆ ಇದ್ದ ವೈಭವವೂ ಇದರ ವಿಸ್ತಾರವೂ ಅಲ್ಲಿ ಈಗ ಉಳಿದಿರುವ ಭವ್ಯವಾದಂಥ ಸುಂದರವಾದಂಥ ಕಟ್ಟಡಗಳಿಂದ ಚೆನ್ನಾಗಿ ಕಂಡುಬರುತ್ತವೆ. ಇವುಗಳಲ್ಲಿ ಬೋಳಗುಮುಟ (ಬೋಲೀಗುಮ್ಮಜ), ಇಬ್ರಾಹಿಮ ರೋಝಾ, ಆಸಾರ ಮಹಾಲ, ಜುಮ್ಮಾ ಮಸೀದೆ ಇವೇ ಮೊದಲಾದ ಕಟ್ಟಡಗಳೂ, ಊರಸುತ್ತಲು ಇರುವ ಹಳೇ ಕೋಟೆಯೂ ಬಹಳ ನೋಡತಕ್ಕಂಥವವೆ.

ಕೋಟೆಯ ಆಕಾರವು ಸಾಧಾರಣ ಕೋಳಿಯ ತತ್ತಿಯಂತೆ ಇರುವದು. ಅದರ ಹೊರಮೈಯಲ್ಲಿ ನಾಲ್ವತ್ತರಿಂದ ಐವತ್ತು ಫೂಟು ಅಗಲಾದ ಒಣ ಕಂದಕವಿದೆ. ಗೋಡೆಯು ಮೂವತ್ತರಿಂದ ಐವತ್ತು ಫೂಟು ಎತ್ತರವಿರುವದು. ಅದರ ಪಿಂಡವು ಸುಮಾರು ಇಪ್ಪತ್ತು ಫೂಟು ಇರುವದು. ಎರಡು ಭದ್ರವಾದ ಕಲ್ಲಿನ ಗೋಡೆಗಳನ್ನು ಇಪ್ಪತ್ತರಿಂದ ಮೂವತ್ತು ಫೂಟಿನ ವರೆಗೆ ನಡುವೆ ಅಂತರವನ್ನಿಟ್ಟು ಒಂದರ ಹಿಂದೊಂದು ಕಟ್ಟಿ, ಎರಡೂ ಗೋಡೆಗಳ ನಡುವೆ ಮಣ್ಣನ್ನು ಒಳಿತಾಗಿ ಜಡಿದು ತುಂಬಿ ಕೋಟೆಯನ್ನು ಮಾಡಿದ್ದಾರೆ. ಈ ಕೋಟೆಯನ್ನು ೧ನೆಯ ಅಲೀ ಆದಿಲ್‌ಶಹನು ಸನ್ ೧೫೬೫ರಲ್ಲಿ ಆರಂಭ ಮಾಡಿ ಎರಡೂವರೆ ವರ್ಷಗಳಲ್ಲಿ ಮುಗಿಸಿದನೆಂದು ಹೇಳುತ್ತಾರೆ. ಎರಡು ಕೊತ್ತಳಗಳ ನಡುವಿನ ಗೋಡೆಯನ್ನು ಒಂದು ಕೊತ್ತಳ ಸಹಿತವಾಗಿ ಒಬ್ಬೊಬ್ಬ ಸರದಾರನ ಕೈಯಿಂದ ಬಾದಶಹನು ಕಟ್ಟಿಸಿದನೆಂತಲೂ ಹೇಳುತ್ತಾರೆ. ಈ ಕೋಟೆಗೆ ಐದು ಅಗಸೆಗಳಿದ್ದು ಅವುಗಳ ಎಡಬಲಗಳಲ್ಲಿ ಒಂದೊಂದರಂತೆ ಹತ್ತು ಕೊತ್ತಳಗಳಿವೆ. ಇವಲ್ಲದೆ ಬೇರೆ ಎಂಬತ್ತಾರು ಕೊತ್ತಳಗಳು, ಅಂದರೆ ಒಟ್ಟಿಗೆ ತೊಂಬತ್ತಾರು ಕೊತ್ತಳಗಳಿವೆ. ಎಲ್ಲ ಕೊತ್ತಳಗಳು ಅರ್ಧವರ್ತುಳಾಕಾರವಾಗಿರುತ್ತವೆ; ಅವುಗಳ ವ್ಯಾಸವು ಎಪ್ಪತ್ತೆರಡು ಫೂಟಿಗಿಂತ ಕಡಿಮೆ ಇಲ್ಲ. ಇವುಗಳಲ್ಲಿ ಶೇರ್ಝರ್ೞ ಕೊತ್ತಳದ ಮೇಲೆ "ಮಲಿಖ ಈ ಮೈದಾನ" (ಬೈಲಿನ ಅರಸು)

ಎಂಬ ಪ್ರಸಿದ್ಧವಾದ ತೋಫು ಇರುತ್ತದೆ. ಇದು ಪಂಚರಸದಿಂದ ಹೊಯ್ದುದ್ದಿರುವದು. ಇದರ ಬಣ್ಣ ತಿಳಿ ಹಸುರು; ಬಾರಿಸಿದರೆ ಗಂಟೆಯ ಹಾಗೆ ನಾದವಾಗುತ್ತದೆ. ಇದರ ಉದ್ದಳತೆ ಹದಿನಾಲ್ಕು ಫೂಟು ಮೂರು ವರೆ ಇಂಚು, ಮದ್ದು ಜಡಿಯುವ ಕೊಠಡಿಯ ಉದ್ದಳತೆ ಐದು ಫೂಟು ಏಳು ಇಂಚು, ಕೊಠಡಿಯ ವ್ಯಾಸ ಒಂದು ಫೂಟು ಮೂರು ಇಂಚು. ಈ ತೋಫಿನ ತೂಕವು ಸುಮಾರು ೯೧೦ ಮಣ ಇರುತ್ತದೆ. ಇದರ ಬಾಯಿಯನ್ನು ಸಿಂಹನ ಬಾಯಿಯ ಆಕಾರವಾಗಿ ಮಾಡಿದ್ದಾರೆ. ಈ ತೋಫಿನ ಮೇಲೆ ಅರಬೀ ಲಿಪಿಯನ್ನು ಕೊರೆದಿದ್ದಾರೆ. ಅದರಲ್ಲಿ ಮಹಮ್ಮದ ಬಿನ್ ಹಸನ ರೂಮಿಯೆಂಬ ಶಿಲ್ಪಿಯು ಇದನ್ನು ಅಹಮ್ಮದನಗರದಲ್ಲಿ ಸನ್ ೧೫೪೯ರಲ್ಲಿ ಹೊಯ್ದನೆಂದು ಬರೆದಿದೆ. ಶೇರ್ಝಿರ್ ಬುರುಜಿನ ಮೇಲೆ ಮದ್ದಿನ ಮನೆಯೂ ಒಂದು ಹೊಂಡವೂ ಉಂಟು. ಲಾಂಡಾ ಕಸಾಬೆಂಬ ಬುರುಜಿನ ಮೇಲೆ 'ಮಲಿಖ ಈ ಮೈದಾನ'ಕ್ಕಿಂತಲೂ ಉದ್ದವಾದ ತೋಫು ಇರುತ್ತದೆ. ಈ ಬುರುಜಿನ ಮೇಲೆ ಜನರು ಹೋಗುವದಿಲ್ಲಾದ ಕಾರಣ ಈ ತೋಫು ಪ್ರಸಿದ್ಧವಿಲ್ಲ.

110793

ಈ ಕೋಟೆಗೆ ಐದು ಅಗಸೆಗಳಿವೆಯಷ್ಟೇ. ಅವುಗಳಲ್ಲಿ ಮಕ್ಕಾ ದರೋಜಾ ಎಂಬದು ಪಶ್ಚಿಮಕ್ಕೆ, ಶಹಾಪೂರ ದರೋಜಾ ಎಂಬದು ವಾಯುವ್ಯಕ್ಕೆ, ಬಾಮನಿ ದರೋಜಾ ಎಂಬದು ಉತ್ತರಕ್ಕೆ, ಅಲ್ಲಾಪುರ ದರೋಜಾ ಎಂಬದು ಪೂರ್ವಕ್ಕೆ, ಮನಗೋಳಿ ದರೋಜಾ ಎಂಬದು ದಕ್ಷಿಣಕ್ಕೆ ಇರುವವು. ಮಕ್ಕಾ ದರೋಜಾ ಎಂಬ ಅಗಸೆಯು ೧೦೦ ವರ್ಷದ ಹಿಂದೆ ಇಕ್ಕಿದ್ದು ಈಗಲೂ ಹಾಗೇ ಇರುತ್ತದೆ. ಅಗಸೆಯ ಒಳಮೈಯಲ್ಲಿ ಈಗ ಸರಕಾರದ ಕಚೇರಿಗಳನ್ನು ಮಾಡಿದ್ದಾರೆ. ಔರಂಗಜೇಬನು ಮನಗೋಳಿ ಅಗಸೆಯಿಂದ ಪಟ್ಟಣವನ್ನು ಜಯಶಾಲಿಯಾಗಿ ಪ್ರವೇಶಿಸಿದ ಕಾರಣ ಅದಕ್ಕೆ ಅವನು ಫತ್ತೇ ದರೋಜಾ ಎಂಬ ಹೆಸರಿಟ್ಟಿದ್ದಾನೆ. ರೇಲ್ವೆ ಸ್ಟೇಶನವು ಕೋಟೆಯ ಪೂರ್ವಕ್ಕೆ ಸುಮಾರು ೫೦೦ ಫೂಟಿನ ಅಂತರದಲ್ಲಿ ಇರುತ್ತದೆ.

ಅಕ್ಷರ ಗ್ರಂಥಾಲಯ
ಕನ್ನಡ ವಿ.ವಿ., ಹಂಪಿ.

ಅರಕಿಲ್ಲೆಯೆಂಬದು ಪಟ್ಟಣದ ಕೋಟೆಯ ಮಧ್ಯಭಾಗದ ಪಶ್ಚಿಮಕ್ಕೆ ವರ್ತುಳಾಕೃತಿಯಾಗಿರುತ್ತದೆ. ಇದರ ಸುತ್ತುಮುತ್ತಲೂ ದೊಡ್ಡ ಕಂದಕವಿರುತ್ತದೆ. ಕಂದಕದ ಹೊರ ಅಂಚಿನ ಸುತ್ತಳತೆಯು ಸುಮಾರು ಒಂದು ಮೈಲು ಆಗುವದು. ಕೋಟೆಯೂ ಕೊತ್ತಳಗಳೂ ಬಹು ಭದ್ರವಾಗಿ ಕಟ್ಟಲ್ಪಟ್ಟವೆ. ಈ ಕೋಟೆಯ ಸುತ್ತುಮುತ್ತು ಒಣ ಕಂದಕವಿರುವದಲ್ಲದೆ ಉತ್ತರ ಈಶಾನ್ಯ ದಿಕ್ಕುಗಳಲ್ಲಿ ನೀರು ತುಂಬಿದ ಎರಡನೆಯ ಕಂದಕವಿರುತ್ತದೆ. ದಕ್ಷಿಣಕ್ಕೂ ಆಗ್ನೇಯಕ್ಕೂ ಎರಡು ಸುತ್ತು ಗೋಡೆಗಳಿವೆ. ಅವೆರಡರ ನಡುವೆ ಕೆಲವು ಹೊಂಡಗಳೂ ಕಾರಂಜಿಗಳೂ ತೋಟದ ಕುರುಹುಗಳೂ ಇರುತ್ತವೆ. ವಾಯುವ್ಯದ ಮೂಲೆಗೆ ಉಪರೀ ಬುರುಜೆಂಬ ಹೆಸರಾದ ಕೊತ್ತಳವಿರುತ್ತದೆ. ಅರಕಿಲ್ಲೆಯಲ್ಲಿ ಭವ್ಯವಾದಂಥ ಮಂದಿರಗಳು ಹಲವುಂಟು.

---

### ೨೪ನೆಯ ಪಾಠ.

## ದೇವರು ನಮ್ಮ ಚಕ್ರವರ್ತಿಗಳನ್ನು ರಕ್ಷಿಸಲಿ.

ಪದ. ರಾಗ—ಶಂಕರಾಭರಣ. ತಾಳ—ರೂಪಕ.

ಪ್ರತಿ ಆರು ಮಾತ್ರೆಗಳ ಗಣದಲ್ಲಿ ೧, ೩, ೫ನೇ ಮಾತ್ರೆಗಳಿಗೆ ತಾಳ ಹೊಡೆಯತಕ್ಕದ್ದು.

I. ಸ೨ ಸ೨ ರಿ೨ ನಿ೨ ಸ೨ ರಿ೨ ಗ೨ ಗ೨ ಮ೨ ಗ೩ ರಿ೧ ಸ೨
ದೇ ವ ರು ನ ಮ್ಮ ಈ ಧೀ ರೋ ದಾ ತ್ತ ವ ರ

II. ರಿ೨ ಸ೨ ನೀ೨ ಸ೬ ಪ೨ ಪ೨ ಪ೨ ಪ೩ ಮಂ೧ ಗ೨
ಭೂ ವ ರ ನಂ ರ ಕ್ಷಿ ಸ ಲಿ ಸ ದಾ

III. ಮಂ೨ ಮಂ೨ ಮಂ೨ ಮಂ೩ ಗ೧ ರಿ೨ ಗ೨ ಮಂ೧ ⁀ ಗ೧ ⁀ ರಿ೧ ⁀ ಸ೧ ಗ೩ ಮ೧ ಪಂ೨
ಈ ವ ಸು ಧೀ ಶ ನು ಆ ವ ⁀ ⁀ ಗಂ ⁀ ಬಾ ಳ ಲಿ

ಧ೧ ⁀ ಮಂ೧ ಗ೨ ರಿ೨ ಸ೬
ಸೌ ⁀ ಖ್ಯ ವಾ ಗಿ ‖ ಪಲ್ಲ ‖

I. ಜ ಯ ವು ಳ್ಳ ವ ನು ವೈ ಭ ವ ಶಾ ಲಿ ಯು
II. ಆ ತ ನಾ ಗಿ ಆ ವ ಗಂ ನ ಮ್ಮ ನು
III. ಆ ಳು ವ ಹಾ ಗೆ ನೀ ರ ಕ್ಷಿ⌒ಸು⌒ದೇ ವ ರೇ
ರಾ⌒ಜ ನ ನು ॥ ೧ ॥

I. ಪ್ರ ಭು ವೆ ದೇ ವ ರೇ ಏ ಳು ವು ದೈ ಗ ಡ
II. ಅ ರ ಸ ನ ಹ ಗೆ ಗ ಳ ನ್ನು ನೀಂ
III. ಚ ದ ರಿ ಸೈ ಯ ವ ರ್ ಸೋ ಲು⌒ವ⌒ಹಾ ಗೆ ನೀಂ
ಮಾ⌒ಳ್ಪ ದೆ ಲೈ ॥ ೨ ॥

I. ಅ ವ ರ ತಂ ತ್ರ ಗ ಳ್ ಕೆ ಡು ವ ಹಾ ಗೆ ನೀಂ
II. ಮಾ ಡು ವ ದು ಅ ವ ರ ಮೋ ಸ ದ
III. ಹಂ ಚಿ ಕೆ ಗ ಳ ನು ಬ ಯ⌒ಲು⌒ಮಾ ಡೆ ಲೈ
ದೇ⌒ವ ರೇ ನೀಂ ॥ ೩ ॥

I. ನ ಮ್ಮೆ ಲ್ಲ ರಾ ಶೆ ಯು ನಿ ನ್ನ ನಾ ಶ್ರೈ ಸಿ ಯೇ
II. ಇ ರು ವ ದು ನ ಮ್ಮೆ ಲ್ಲ ರ ನ್ನು ನೀಂ
III. ಕ ರು ಣ ದಿಂ ದ ಲಿ ನೋ ಡು⌒ತ⌒ದೇ ವ ರೇ
ರ⌒ಕ್ಷಿ ಸೆ ಲೈ ॥ ೪ ॥

I. ಆ ತ ಗೆ ಸಿ ನ್ನ ಯ ವ ರ ಗ ಳ ಲ್ಲಿ ಯ
II. ಅ ತ್ಯು ತ್ತ ಮ ವ ರ ಗ ಳ ನ್ನು ನೀ
III. ದ ಯ ದಿ ಪಾ ಲಿ ಸು ಆ ವ⌒ಗಂ⌒ಆ ಳ ಲಿ
ನ⌒ಮ್ಮ ನೃ ಪಂ ॥ ೫ ॥

I. ಅ ವ ನು ನ ಮ್ಮ ಯ ಕಾ ಯಿ ದೆ ಗ ಳ ನು
II. ಕಾ ಪಾ ಡ ಲಿ ದೇ ವ ರು ಆ ತ ನ
III. ಕಾ ಯ ಲಿ ಯ ನ್ನು ತ ಪ್ರಾ ರ್ಥ⌒ನೆ⌒ಮಾ ಡು ವಾ
ಮೋ⌒ದ ದಿಂ ದ ॥ ೬ ॥

I. ಮಾ ನ ಸ ದಿಂ ದ ಲೂ ಉ ಚ್ಚ ಸ್ವ ರ ದೆ ಯೂ
II. ನಾ ವೆ ಲ್ಲ ರು ಪೊ ಗ ಳ್ವಂ ತಾ ತ ನಿಂ
III. ಕಾ ರ್ಯ ಗ ಳಾ ಗ ಲಿ ರಾ⁀ಜ ನಂ⁀ದೇ ವ ರು
ರ⁀ಕ್ಷಿ ಸ ಲಿ ॥ ೭ ॥

ಸೂಚನೆಗಳು:—

೧. ಪದ್ಯದಲ್ಲಿ ತೋರಿಸಿದ ಈ ⁀ ಕಂಸವು ಎರಡು ಸ್ವರಗಳನ್ನು ಕೂಡಿಸಿದ ಚಿಹ್ನವಿರುತ್ತದೆ.

೨. ೧ನೆಯ ನುಡಿಯಲ್ಲಿ ಸ್ವರಗಳ ಬಲಕ್ಕೆ ಕೆಳಬದಿಗೆ ಬರೆದ ಅಂಕೆಯು ಆ ಸ್ವರವನ್ನು ಅಷ್ಟು ಮಾತ್ರೆಗಳ ತನಕ ಎಳೆಯಬೇಕೆಂಬದನ್ನು ಸೂಚಿಸುತ್ತದೆ.

೩. . ಈ ಗುರ್ತು ಕೋಮಲ ಸ್ವರವನ್ನು ಸೂಚಿಸುವದು.

೪. ಸ್ವರದ ಕೆಳಗೆ ಇದ್ದ–ಈ ಗುರುತು ಮಂದರಸಪ್ತಕದ ಸ್ವರವನ್ನು ಸೂಚಿಸುವದು.

೫. ಪಲ್ಲದೊಳಗಿನ ಪ್ರತಿಯೊಂದು ಚರಣದ ಮೇಲೆ ಹಾಕಿದ ಸ್ವರಗಳೇ ಉಳಿದ ಏಳೂ ನುಡಿಗಳ ಪ್ರತಿಯೊಂದು ಚರಣದ ಮೇಲೆ ಅಷ್ಟೇ ಮಾತ್ರೆಗಳಿಂದ ಕೂಡಿಕೊಂಡು ಇರುವವು.

## ೨ನೆಯ ಭಾಗ— ಇತಿಹಾಸದ ಮತ್ತು ಭೂಗೋಲದ ಪಾಠಗಳು.

### ೨೫ನೆಯ ಪಾಠ.

### ಸೀತಾದೇವಿಯು.

ಸೀತಾದೇವಿಯನ್ನು ಅರಿಯದವರು ಅಪರೂಪ. ಈಕೆಯು ಜನಕ ರಾಜನ ಮಗಳು; ಶ್ರೀರಾಮಚಂದ್ರನ ಹೆಂಡತಿಯು. ಇವಳು ದೊಡ್ಡವಳಾದ ಬಳಿಕ ಜನಕನು ಇವಳ ಸ್ವಯಂವರದ ಸಿದ್ಧತೆಯನ್ನು ಮಾಡಿದನು. ಇವಳ ಚೆಲುವಿಕೆಯನ್ನೂ ಒಳ್ಳೆಯ ಗುಣಗಳನ್ನೂ ಕೇಳಿ ಹಿಂದುಸ್ತಾನದೊಳಗಿನ ದೇಶದೇಶದ ಜನರೂ ರಾಜಕುಮಾರರೂ ಇವಳನ್ನು ಮದುವೆ ಮಾಡಿಕೊಳ್ಳಬೇಕೆಂದು ಬಂದರು. ಅಯೋಧ್ಯೆಯ ಅರಸನಾದ ದಶರಥನ ಮಕ್ಕಳಾದ ರಾಮನೂ ಲಕ್ಷ್ಮಣನೂ ಸ್ವಯಂವರಕ್ಕೆ ಬಂದಿದ್ದರು. ನೆರೆದವರಲ್ಲಿ ಶ್ರೀರಾಮಚಂದ್ರನೇ ಬಲವಂತನೂ ಶೂರನೂ ಎಂದು ಬಗೆದು ಸೀತೆಯು ರಾಮನ ಕೊರಳಿಗೆ ಮಾಲೆಯನ್ನು ಹಾಕಿದಳು. ಜನಕನು ಒಳ್ಳೆಯ ಸಡಗರದಿಂದ ಲಗ್ನಸಮಾರಂಭವನ್ನು ಮಾಡಿ ಮಗಳನ್ನು ಅತ್ತೆಯ ಮನೆಗೆ ಕಳುಹಿಸಿಕೊಟ್ಟನು.

ಸೀತೆಯು ಅತ್ತೆಯ ಮನೆಗೆ ಬಂದ ಬಳಿಕ ರಾಜಸುಖವನ್ನು ಅನುಭವಿಸಲಿಲ್ಲ. ಕೈಕೇಯಿಯ ಸಂಚಿನಿಂದ ರಾಮನು ವನವಾಸಕ್ಕೆ ಹೋದದ್ದನ್ನು ನೀವು ಬಲ್ಲಿರಿ. ರಾಮನು ಸೀತೆಯನ್ನು ಅಯೋಧ್ಯೆಯಲ್ಲಿರಿಸಿ ತಾನೊಬ್ಬನೇ ವನಕ್ಕೆ ತೆರಳಬೇಕೆಂದು ಯೋಚಿಸಿ ಎಲ್ಲ ಸಿದ್ಧತೆಯನ್ನು ಮಾಡಿಕೊಂಡು ಸೀತೆಗೆ ಹೇಳಿ ಹೋಗಬೇಕೆಂದು ಆಕೆಯ ಬಳಿಗೆ ಬಂದನು. ಆಕೆಯು, ರಾಮನು ತನ್ನೊಡನೆ ಕರಕೊಂಡು ಹೋಗಲಿಕ್ಕೆ ಬಂದನೆಂದು ಎಣಿಸಿದ್ದಳು. ಆದರೆ ಆತನೊಬ್ಬನೇ ಹೋಗುತ್ತಾನೆಂದು ತಿಳಿದು ದುಃಖದಿಂದ—“ಪ್ರಾಣಪತಿಯೇ, ನಾನು ನಿನ್ನನ್ನು ಅಗಲಿ ಅರೆಗಳಿಗೆ ಇರಲಾರೆನು. ನಿನ್ನ ಜೊತೆಯಲ್ಲಿಯೇ ಬರುವೆನು,” ಎಂದು ನುಡಿ

ದಳು. ರಾಮನು ವನವಾಸದ ಕಷ್ಟಗಳನ್ನು ತಿಳಿಸಿ ಹೇಳಿದನು. ಆದರೆ ಅವಳು ತನ್ನ ಮಾತು ತಿರುಗಿಸಲಿಲ್ಲ. ಕಡೆಯಲ್ಲಿ ಅವಳು ರಾಮನನ್ನು ಕುರಿತು—"ಮುದ್ದಿನನಲ್ಲನೇ, ನೀನು ಅಡವಿಯಲ್ಲಿ ಅಲೆಯುತ್ತ ಕಷ್ಟ



ಪಡುವಾಗ ನಾನು ಅಯೋಧ್ಯೆಯಲ್ಲಿ ಸುಖವಾಗಿರುವದು ಎಂದಿಗೂ ಆಗದು. ಅರಣ್ಯವಾಸವು ನಿಮ್ಮನ್ನು ಅಗಲಿರುವದಕ್ಕಿಂತ ನನಗೆ ಕಷ್ಟ ವೆನಿಸದು. ಆದ್ದರಿಂದ ಪತಿಯೇ, ನಿನ್ನೊಡನೆ ಬಂದು ನಿನಗೊದಗುವ

ವನವಾಸದ ಕಷ್ಟವನ್ನು ಉಣ್ಣಲಿಕ್ಕೆ ಮನಃಪೂರ್ವಕವಾಗಿ ಇಚ್ಛಿಸುತ್ತೇನೆ," ಎಂದು ನುಡಿದಳು.

ರಾಮಚಂದ್ರನು ಸೀತೆಯ ಅನಿರ್ವಾಚ್ಯ ಪ್ರೇಮವನ್ನೂ ಪ್ರಾರ್ಥನೆಯನ್ನೂ ಆಲಿಸಿ ವನಕ್ಕೆ ಕರಕೊಂಡು ನಡೆದನು. ರಾಮಚಂದ್ರನು ಮೊದಲೇ ಹೇಳಿದಂತೆ ಆ ಅರಣ್ಯದಲ್ಲಿ ಅವಳಿಗೆ ಎಷ್ಟೋ ಕಷ್ಟಗಳು ಬಂದರೂ ಅವಳು ಗಂಡನ ಮೇಲಿನ ಅಪಾರಪ್ರೇಮದ ಸಲುವಾಗಿ ಅವುಗಳನ್ನು ಸಹಿಸಿದಳು.

ಆ ಅರಣ್ಯದಲ್ಲಿ ಹಿಂಸ್ರ ಪಶುಗಳ ಭಯಕ್ಕಿಂತ ರಾಕ್ಷಸರಂಥ ಕಾಡುಜನರ ಅಂಜಿಕೆಯೂ ಬಹಳವಿತ್ತು. ಆದರೆ ರಾಮಲಕ್ಷ್ಮಣರ ಶೌರ್ಯದ ಮುಂದೆ ಅವರದೇನೂ ಸಾಗಲಿಲ್ಲ. ಆದರೆ ಕಟ್ಟಕಡೆಗೆ ಲಂಕೆಯ ಅರಸನಾದ ರಾವಣನು ಸಂಚು ಮಾಡಿ ಸೀತೆಯನ್ನು ಅಪಹರಿಸಿದನು.

ರಾವಣನು ಸೀತೆಯನ್ನು ಲಂಕೆಗೆ ಒಯ್ದು ಬಳಿಕ ಅವಳನ್ನು ಅಶೋಕವನದಲ್ಲಿಟ್ಟಿದ್ದನು. ಅವನು ಆಗಾಗ್ಗೆ ಅವಳ ಬಳಿಗೆ ಹೋಗಿ ತನ್ನ ರಾಣಿಯಾಗೆಂದು ಹೇಳುವನು. ಅವನು ಎಷ್ಟೇ ರೀತಿಯಿಂದ ಆಶೆ ತೋರಿಸಿದಾಗ್ಯೂ, ಎಷ್ಟೇ ರೀತಿಯಿಂದ ಬೆದರಿಸಿದರೂ ಆಕೆಯು ಮೋಹಕ್ಕೊಳಗಾಗಲಿಲ್ಲ, ಅಂಜಲೂ ಇಲ್ಲ. ಅದರಿಂದ ಅವನ ಉದ್ದೇಶವು ಸಿದ್ಧಿಯನ್ನು ಹೊಂದಲಿಲ್ಲ. ರಾವಣನಂಥ ಬಲಿಷ್ಠ ರಾಕ್ಷಸನ ಮುಂದೆ ಸೀತೆಯು ಅಲ್ಪ ಶಕ್ತಿಯೇನೂ ಅಲ್ಲ. ಆದರೂ ಒಮ್ಮೊಮ್ಮೆ ಅತಿಶಯ ಸಿಟ್ಟಿಗೆದ್ದು ಆವೇಶದಿಂದ ಮಾತಾಡಹತ್ತಿದಳೆಂದರೆ ರಾವಣನು ಬೆದರಿ ಗದಗದ ನಡುಗುತ್ತಿದ್ದನು. ಮನುಷ್ಯನು ತನ್ನ ಮನಸ್ಸಿನ ಬಲದಿಂದ ತನ್ನ ಮನಕ್ಕೆ ಬಂದದ್ದನ್ನು ಮಾಡಬಹುದು.

ಕಡೆಗೆ ರಾಮಚಂದ್ರನು ಲಂಕೆಯ ಮೇಲೆ ಸಾಗಿಹೋಗಿ ಸೀತೆಯನ್ನು ದುಃಖಮುಕ್ತ ಮಾಡಿದನು. ಮರಳಿ ಅಯೋಧ್ಯೆಗೆ ಬಂದ ಬಳಿಕ ಅವಳು ಪುನಃ ಅರಣ್ಯವಾಸವನ್ನು ಸ್ವೀಕರಿಸಬೇಕಾಯಿತು. ಸೀತೆಯ

ಕಷ್ಟಗಳು ಮಿತಿಮೀರಿದವು. ಆದಕಾರಣ ಈಗ ಯಾರಾದರೂ ಹೆಂಗಸರು ಬಹಳೇ ಕಷ್ಟಬಡುತ್ತಿದ್ದರೆ ತಾವೂ ಸೀತೆಯಂತೆ ದುರ್ದೈವಿಗಳೆಂದು ಹೇಳಿಕೊಳ್ಳುವರು.

---

### ೨೬ನೆಯ ಪಾಠ.

## ವೀರನರಪತಿ ಕೃಷ್ಣರಾಯ.

ಹುಕ್ಕ ಬುಕ್ಕ ಎಂಬ ಕಲಿಗಳ ಮನೆತನದವರು ವಿಜಯನಗರದಲ್ಲಿ ೧೬೦ ವರ್ಷ ರಾಜ್ಯವಾಳಿದ ಬಳಿಕ ಆ ರಾಜವಂಶವು ಮುಗ್ಗಿತು. ಮುಂದೆ ಬಲಿಷ್ಠರಾದವರೇ ಪಟ್ಟಾಧಿಕಾರಿಗಳಾದರು; ಆದ್ದರಿಂದ ಕೇವಲ ಅರಾಜಕವಾಯಿತೆಂದು ಹೇಳಬಹುದು. ಈ ಸಮಯದಲ್ಲಿ ಕೃಷ್ಣರಾಯನೆಂಬ ಮಂತ್ರಿಯು ಯಾವತ್ತೂ ಮುಖ್ಯ ಜನರ ಸಮ್ಮತಿಯಿಂದ ಅರಸನಾಗಿ ೧೫೦೯—೧೫೨೭ರ ವರೆಗೆ ಒಳ್ಳೆಯ ವೈಭವದಿಂದ ಆಳಿದನು.

ಕೃಷ್ಣರಾಯನು ಶೂರನೂ, ಅಭಿಮಾನಿಯೂ, ಕಾರ್ಯದಕ್ಷನೂ ಆಗಿದ್ದನು. ಆತನಿಗೆ ಸುಮ್ಮನೆ ಕೂಡ್ರುವದು ಎಷ್ಟು ಮಾತ್ರವೂ ಸೇರುತ್ತಿದ್ದಿಲ್ಲ. ಅವನು ಬೆಳಗು ಮುಂಜಾವಿನಲ್ಲಿ ಎದ್ದು ಗರಡೀಸಾಧಕವನ್ನು ಮಾಡಿ, ಆಡಳಿತದ ಎಲ್ಲ ಕೆಲಸಗಳನ್ನು ತಾನೇ ನೋಡುತ್ತಿದ್ದನು. ವಿಜಾಪುರದ ಆದಿಲ್‌ಶಹನು ವಿಜಯನಗರದವರಿಂದ ಕಸುಕೊಂಡಿದ್ದ ರಾಯಚೂರು-ಮುದಗಲ್ಲುಗಳ ಕೋಟೆಗಳು ತಿರುಗಿ ತನ್ನ ಕೈಸೇರಿದ ಹೊರತು ಕೃಷ್ಣರಾಯನಿಗೆ ಸಮಾಧಾನವಾಗಲೊಲ್ಲದು. ಆ ಕೋಟೆಗಳನ್ನು ವಶಮಾಡಿಕೊಳ್ಳುವದಕ್ಕಾಗಿ ಆತನು ಹೊಂಚುಹಾಕಿದ್ದನು. ಹೀಗಿರಲು ಕೃಷ್ಣರಾಯನ ಚತುರ ಮಂತ್ರಿಯಾದ ತಿಮ್ಮರಸನೆಂಬವನು ಹಂಚಿಕೆಯಿಂದ ಅಹಮ್ಮದನಗರ, ಬೀದರ, ಗೋವಳಕೊಂಡ ರಾಜ್ಯಗಳ ಸುಲ್ತಾನರನ್ನು ವಿಜಾಪುರದ ಆದಿಲ್‌ಶಹನಿಂದ ಒಡಿಸಿದನು. ಆ ಮೇಲೆ ಕೃಷ್ಣರಾಯನು ಒಂದು ನೆವದಿಂದ ಆದಿಲ್‌ಶಹನ ಕೂಡ ಜಗಳ ತೆಗೆದು, ಒಳ್ಳೆಯ

ಸಂಧಿಯನ್ನು ಸಾಧಿಸಿ ದಂಡೆತ್ತಿ ಹೋಗಿ, ರಾಯಚೂರ ಕೋಟೆಯನ್ನು ಮುತ್ತಿದನು. ಆಗ ಆದಿಲ್‌ಶಹನಿಗೂ ಕೃಷ್ಣರಾಯನಿಗೂ ಕಡು ಕದನವಾಗಿ ಅದರಲ್ಲಿ ಆದಿಲ್‌ಶಹನು ಪೂರ್ಣವಾಗಿ ಸೋಲಲು, ರಾಯಚೂರು ಮುದಗಲ್ಲು ಕೋಟೆಗಳು ನಿರಾಯಾಸದಿಂದ ಕೃಷ್ಣರಾಯನ ಕೈಸೇರಿದವು.

ಕೃಷ್ಣರಾಯನು ಶೂರನಿದ್ದಂತೆ ಶಾಂತನೂ ನ್ಯಾಯಿಯೂ ದಯೆಯುಳ್ಳವನೂ ಆಗಿದ್ದನು. ತನಗೆ ಶರಣಾಗತರಾದ ವೈರಿಗಳನ್ನು ಅವನು ಎಂದೂ ಹಿಂಸಿಸುತ್ತಿದ್ದಿಲ್ಲ; ಹುಡುಗರನ್ನೂ ಹೆಂಗಸರನ್ನೂ ಪರಾಮರಿಸುತ್ತಿದ್ದನು. ವಿಜಯನಗರದ ರಾಜ್ಯವು ಕೃಷ್ಣರಾಯನ ಕಾಲದಲ್ಲಿ ಹೊಂದಿದಷ್ಟು ವಿಸ್ತಾರವನ್ನು ಎಂದೂ ಹೊಂದಲಿಲ್ಲ. ಗೋದಾವರಿಯಿಂದ ರಾಮೇಶ್ವರದ ವರೆಗೆ ಇವನ ಸಾಮ್ರಾಜ್ಯವು ಹಬ್ಬಿತ್ತು. ಅನೇಕ ಮಂಡಲೇಶ್ವರರು ಇವನ ಓಲಗದಲ್ಲಿ ಕೈಕಟ್ಟಿಕೊಂಡು "ಜೀಯಾ" ಎಂದು ನಿಲ್ಲುತ್ತಿದ್ದರು. ಪೋರ್ತುಗಾಲದ ಪ್ರವಾಸಿಗಳು ಕೃಷ್ಣರಾಯನ ರಾಜಧಾನಿಯ ಸೌಂದರ್ಯವನ್ನೂ, ಓಲಗದ ವೈಭವವನ್ನೂ, ಸೇನೆಯ ಆಡಂಬರವನ್ನೂ ಕಣ್ಣಾರೆ ಕಂಡು ವಿಸ್ಮಿತರಾಗಿ, ಕೃಷ್ಣರಾಯನ ಘನತೆಗೆ ಎಣೆಯಿಲ್ಲವೆಂದು ಬಗೆಬಗೆಯಿಂದ ಬಣ್ಣಿಸಿದ್ದಾರೆ. ಕೃಷ್ಣರಾಯನು ಹಂಪೆಯ ವಿರೂಪಾಕ್ಷದೇವರ ಗೋಪುರವನ್ನೂ, ಬೇರೆ ದೊಡ್ಡ ದೊಡ್ಡ ದೇವಸ್ಥಾನಗಳನ್ನೂ, ಮಂದಿರಗಳನ್ನೂ, ಅನೇಕ ಕೆರೆ-ಕಾಲುವೆಗಳನ್ನೂ ಕಟ್ಟಿಸಿದನು. ಇವನ ಆಳಿಕೆಯಲ್ಲಿ ಪ್ರಜೆಗಳು ಸಮೃದ್ಧಿಯನ್ನು ಪಡೆದು ಸುಖದಿಂದ ಇದ್ದರು. ಮುತ್ತು, ಮಾಣಿಕ, ವಜ್ರ ಮುಂತಾದ ನವರತ್ನಗಳನ್ನು ವರ್ತಕರು ಬಯಲಂಗಡಿಗಳಲ್ಲಿ ಇಟ್ಟುಕೊಂಡು ನಿರ್ಭಯದಿಂದ ಮಾರುತ್ತಿದ್ದರು. ಆದರೆ ಕೃಷ್ಣರಾಯನ ತರುವಾಯ ಪಟ್ಟಕ್ಕೆ ಬಂದ ಅರಸರು ಬಲಹೀನರೂ ದುರ್ವ್ಯಸನಿಗಳೂ ಆದದ್ದರಿಂದ, ವಿಜಯನಗರದ ಸಾಮ್ರಾಜ್ಯವು ಕುಂದುತ್ತ ನಡೆದು ಕಡೆಗೆ ಮುಸಲ್ಮಾನರ ಕುನುಸಿಗೆ ಬಲಿಯಾಯಿತು. ದೈವಗತಿಯನ್ನು ಯಾರೂ ತಡೆಯಲಾರರು.

## ೨೭ನೆಯ ಪಾಠ.

# ಸ್ವಾಮಿಭಕ್ತಳಾದ ಪನ್ನಾದಾಸಿ.

ಮೇವಾಡದ ಅರಸನಾದ ವಿಕ್ರಮಜಿತುವನ್ನು ಬನಬೀರನೆಂಬವನು ಕೊಂದು, ಚಿತ್ತೂರ ಪಟ್ಟಕ್ಕೆ ಕೂತನು. ವಿಕ್ರಮಜಿತುವಿಗೆ ಉದಯ ಸಿಂಗನೆಂಬ ಒಬ್ಬನೇ ಮಗನಿದ್ದನು. ಆ ಶಿಶುವನ್ನು ಪನ್ನಾ ಎಂಬ ಒಕ್ಕಲಗಿತ್ತಿಯು ಜೋಕೆ ಮಾಡುತ್ತಿದ್ದಳು. ವಿಕ್ರಮಜಿತುವಿನ ಕೊಲೆಯಾದಾಗ ಉದಯಸಿಂಗನು ಉಂಡು ಮಂಚದ ಮೇಲೆ ಮಲಗಿದ್ದನು.



ಪನ್ನೆಯು ಅರಸನ ಕೊಲೆಯನ್ನು ಕೇಳಿ ಗಾಬರಿಯಾಗಿ, ಅರಸನನ್ನು ಕೊಂದ ನೀಚನು ಈ ಕೂಸನ್ನು ಕೊಲ್ಲದೆ ಬಿಡನೆಂದು ನಿಶ್ಚಯಿಸಿ, ತನ್ನ ಒಡೆಯನು ಬದುಕುವ ಉಪಾಯವನ್ನು ಯೋಚಿಸತೊಡಗಿದಳು. ಆಗ ಆ ಸ್ವಾಮಿಭಕ್ತಳು ಒಂದು ಬುಟ್ಟಿಯಲ್ಲಿ ಆ ಬಾಲಕನನ್ನು ಮಲಗಿಸಿ ಮೇಲೆ ಎಲೆಗಳನ್ನೂ ಹಣ್ಣುಗಳನ್ನೂ ಹಾಕಿ, ತನ್ನ ನಂಬಿಗೆಯ ಆಳನ್ನು ಕರೆದು—

"ನೀನು ಈ ಬುಟ್ಟಿಯನ್ನು ತಕ್ಕೊಂಡು ಹೋಗಿ ಹೊಳೆಯ ದಂಡೆಯ ಮೇಲೆ ಕುಳಿತಿರು; ಹಾದಿಯಲ್ಲಿ ಯಾರಾದರೂ ಕೇಳಿದರೆ, ಹಣ್ಣುಗಳಿರುವವೆಂದು ಹೇಳು; ನಾನು ಈಗಲೇ ನಿನ್ನ ಬೆನ್ನ ಹಿಂದೆ ಬಂದೇನು," ಎಂದು ಹೇಳಿ, ಆಳನ್ನು ಕಳುಹಿ ತೆರವಾದ ಆ ಮಂಚದ ಮೇಲೆ ತನ್ನ ಮಗನನ್ನು ಮಲಗಿಸಿದಳು. ಅಷ್ಟರಲ್ಲಿ ಬನಬೀರನು ಬಿಚ್ಚುಗತ್ತಿಯನ್ನು ಹಿಡಕೊಂಡು ಅಲ್ಲಿಗೆ ಬಂದು—"ರಾಜಪುತ್ರನು ಎಲ್ಲಿ?" ಎಂದು ಪನ್ನೆಯನ್ನು ಕೇಳಿದನು. ಆಗ ಆಕೆಯು ಮಾತಾಡಲಾರದೆ ತನ್ನ ಮಗನ ಕಡೆಗೆ ಬೆರಳುಮಾತ್ರ ತೋರಿಸಿದಳು. ಕೂಡಲೆ ಬನಬೀರನು ಕತ್ತಿಯಿಂದ ಆ ಕೂಸನ್ನು ಇರಿದು ಕೊಂದು ಹೊರಟುಹೋದನು. ಇದರಿಂದ ಪನ್ನೆಗೆ ಆದ ದುಃಖವನ್ನು ಹೇಳಲಾಸಲ್ಲ.

ಪನ್ನೆಯು ಆಗ ಅಳುತ್ತ ಕೂಡ್ರುವಂತೆಯೂ ಇದ್ದಿಲ್ಲ. ತನ್ನ ಒಡೆಯನ ಗತಿಯು ಏನಾಗಿರುವದೆಂಬದನ್ನು ನೋಡುವದಕ್ಕಾಗಿ ಆಕೆಯು ಹೊಳೆಯ ದಂಡೆಗೆ ಹೋದಳು. ಅಲ್ಲಿ ಆ ನಂಬಿಗೆಯ ಆಳು ಆಕೆಯ ದಾರಿಯನ್ನು ನೋಡುತ್ತ ಕುಳಿತಿದ್ದನು. ಪನ್ನೆಯು ಆ ಆಳನ್ನು ಕರಕೊಂಡು ಮುಂದಕ್ಕೆ ಸಾಗಿ, ಅರವಲೀ ಗುಡ್ಡದೊಳಗಿಂದ ಹಾದು, ಕುಮುಳನೇರವೆಂಬ ಪಟ್ಟಣಕ್ಕೆ ಹೋದಳು. ಅಲ್ಲಿಯ ಅಧಿಕಾರಿಯು ಸ್ವಾಮಿಭಕ್ತಿಯನ್ನು ನೆನೆಸಿ, ಉದಯಸಿಂಗನನ್ನು ರಕ್ಷಿಸುವದಕ್ಕೆ ಒಡಂಬಟ್ಟನು. ಆಗ ಸ್ವಾಮಿಭಕ್ತಳಾದ ಪನ್ನೆಯು ತುಂಬಾ ಆನಂದಬಟ್ಟು, ತಾನು ಇಲ್ಲಿ ಇರುವದು ಸಂಶಯಕ್ಕೆ ಕಾರಣವೆಂದು ತಿಳಿದು ಕೂಸನ್ನು ಒಪ್ಪಿಸಿ ದುಃಖದಿಂದ ತನ್ನ ಊರಿಗೆ ತೆರಳಿದಳು.

---

### ೨೮ನೆಯ ಪಾಠ.

## ಅಹಲ್ಯಾಬಾಯಿ.

ಇಂದೂರ ಸಂಸ್ಥಾನದ ಒಡೆಯರಾದ ಹೋಳಕರರ ವಂಶದಲ್ಲಿ ಅಹಲ್ಯಾಬಾಯಿಯು ಚಂದ್ರನಂತೆ ಆಹ್ಲಾದಕರಳಾಗಿ ಶೋಭಿಸುವಳು.



ಈಕೆ ಮಲ್ಹಾರರಾವ ಹೋಳಕರನ ಮಗನಾದ ಖಂಡೇರಾಯನೆಂಬ ಕಲಿಯ ಹೆಂಡತಿಯು. ಸಿಂದೆ ಎಂಬ ಮನೆತನದವರ ಹೆಣ್ಣುಮಗಳು. ಈಕೆಗೆ ಮಾಲೇರಾಯನೆಂಬ ಮಗನೂ ಒಬ್ಬ ಹೆಣ್ಣುಮಗಳೂ ಹೀಗೆ ಇಬ್ಬರೇ ಮಕ್ಕಳಿದ್ದು, ಮಾಲೇರಾಯನು ತಲೆ ತಿರುಗಿದ ಹುಚ್ಚನಾಗಿದ್ದನು. ಮಲ್ಹಾರರಾಯು ನಿರುವಾಗಲೇ ಖಂಡೇರಾಯನು ಒಂದು ಯುದ್ಧದಲ್ಲಿ ಸತ್ತದ್ದರಿಂದ ಮಲ್ಹಾರರಾಯನ ಮರಣವ ನಂತರ (೧೭೬೫) ಮಾಲೇರಾಯನು ರಾಜ್ಯಾಧಿಕಾರಿಯಾದನು. ಆದರೆ ಹೆಸರಿಗೆ ಮಾತ್ರ ಆ ಹುಚ್ಚ ಮಗನನ್ನು ಮುಂದೆ ಮಾಡಿ ಅಹಲ್ಯಾಬಾಯಿಯು ತಾನೇ ರಾಜ್ಯಕಾರಭಾರ ಮಾಡುತ್ತಿದ್ದಳು. ಆದರೆ ದುರ್ದೈವದಿಂದ ಮುಂದೆ ಒಂಬತ್ತೇ ತಿಂಗಳೊಳಗೆ ಮಾಲೇರಾಯನೂ

ತೀರಿಕೊಂಡದ್ದರಿಂದ ಅಹಲ್ಯಾಬಾಯಿಗೆ ಹೇಳಕೂಡದಷ್ಟು ಕ್ಲೇಶ ವಾಯಿತು. ಆದರೆ ಆಗ ಪ್ರಜೆಗಳನ್ನು ಪ್ರತಿಪಾಲಿಸಲಿಕ್ಕೆ ಬೇರೆ ಯಾರೂ ಇದ್ದಿಲ್ಲ. ಆಗ ಖಾನದೇಶದ ಪಶ್ಚಿಮ ಭಾಗ ಸಹಿತ ಇಡೀ ಮಾಳವಾ ಪ್ರಾಂತವು ಹೋಳಕರನ ರಾಜ್ಯವಾಗಿತ್ತು. ಈ ವಿಸ್ತಾರವಾದ ರಾಜ್ಯದ ಪ್ರಜೆಗಳನ್ನು ಸಂರಕ್ಷಿಸುವ ಕರ್ತವ್ಯವನ್ನು ದೇವರು ತನ್ನ ಮೇಲೆಯೇ ಹೊರಿಸಿದ್ದಾನೆಂದರಿತು, ಅಹಲ್ಯಾಬಾಯಿಯು ಏಕಾಂತ ಕಾಲಕ್ಕೆ ಮಾತ್ರ ಪುತ್ರಶೋಕಕ್ಕೆ ಅವಸರವಿಟ್ಟು ದಾಕ್ಷಿಣ್ಯದಿಂದ ರಾಜ್ಯದಾಡಳಿತ ವನ್ನು ನಡೆಸಿದಳು. ಧರ್ಮನಿಷ್ಠೆ, ದಾತೃತ್ವ, ಸಭ್ಯವೃತ್ತಿ, ಕರ್ತವ್ಯ ಜಾಗ್ರತೆ, ಧೈರ್ಯ, ಮುತ್ಸದ್ದಿತನ ಮುಂತಾದ ಸದ್ಗುಣಗಳಲ್ಲಿ ಅಹಲ್ಯಾ ಬಾಯಿಯನ್ನು ಹೋಲುವಂಥ ಗಂಡಸನ್ನಾಗಲಿ ಹೆಂಗಸನ್ನಾಗಲಿ ಕಾಣು ವದು ಪರಮ ದುರ್ಲಭವು. ಅಜ್ಞಾನಿಗಳಾದ ಪ್ರಜೆಗಳಲ್ಲಿ ಸಹಾನುಭೂತಿ ಯಿಂದ ಅಧಿಕಾರ ನಡೆಸತಕ್ಕಂಥ ಸಂಭಾವಿತ ಜನರನ್ನೇ ಹುಡುಕಿ ಅಧಿಕಾ ರದ ಕೆಲಸಕ್ಕೆ ರಾಣಿಯು ನೇಮಿಸುವಳು; ದುರಾಚಾರಿಗಳನ್ನು ದಂಡಿಸು ವಳು; ಕುಚೋದ್ಯ ಮಾಡುವವರನ್ನು ಮುಂದೆ ಬರಗೊಡುತ್ತಿದ್ದಿಲ್ಲ; ಪ್ರಜೆಗಳ ಕೊರತೆಗಳನ್ನು ಆದಷ್ಟು ಬೇಗ ಪೂರಯಿಸುವಳು; ಅವರ ಮೇಲೆ ಬಲಾತ್ಕಾರವನ್ನೆಷ್ಟು ಮಾತ್ರವೂ ನಡೆಯಗೊಡುತ್ತಿದ್ದಿಲ್ಲ. ಹಳ್ಳಿಗ ಳಲ್ಲಿ ಗುಡಿಗಳನ್ನೂ ಧರ್ಮಶಾಲೆಗಳನ್ನೂ ಕಟ್ಟಿ, ಬಡಬಗ್ಗರಿಗೂ ಅನಾಥ ರಿಗೂ ಪೋಷಣವಾಗುವಂತೆ ಛತ್ರಗಳನ್ನೂ ಸದಾವರ್ತಗಳನ್ನೂ ಇಡಿಸಿ ದಳು. ದುರ್ಬಲವಾದ ಗ್ರಾಮ್ಯಪಶುಗಳನ್ನು ಸಂರಕ್ಷಿಸಲಿಕ್ಕೆ ಸಹ ಅಹಲ್ಯಾ ಬಾಯಿಯು ಎಷ್ಟೋ ಕಡೆಗಳಲ್ಲಿ ಪಶುಶಾಲೆಗಳನ್ನು ಕಟ್ಟಿಸಿದಳೆಂದು ಕೀರ್ತಿಯುಂಟು.

ಎಲ್ಲಿ ಹೋದರೂ ಕೆಟ್ಟ ಜನರು ಇದ್ದೇ ಇರುತ್ತಾರೆ. ಅಹಲ್ಯಾ ಬಾಯಿಯ ಕೈಕೆಳಗಿನ ಸರದಾರರು ಒಳಸಂಚು ಮಾಡಿಕೊಂಡು ಆಕೆಗೆ— “ನೀನು ಹೆಂಗಸಾದದ್ದರಿಂದ ಕಾರಭಾರವು ಸರಿಯಾಗಿ ಸಾಗುವದಿಲ್ಲಾದ

ಕಾರಣ ದತ್ತಪುತ್ರನನ್ನು ತೆಗೆದುಕೊಳ್ಳಲಿಕ್ಕೇ ಬೇಕು," ಎಂದು ಪತ್ರ ಬರೆದರು. ಅದನ್ನು ನೋಡಿದ ಕೂಡಲೆ ಆ ರಾಣಿಯು ಅವರನ್ನೂ ಅವರಿಗೆ ಗೌಪ್ಯದಿಂದ ಸಹಾಯ ಮಾಡುವವರನ್ನೂ ಸೆರೆಯಲ್ಲಿ ಹಾಕಿ ಭದ್ರವಾಗಿ ಕಾವಲಿಟ್ಟಳು. ಮುಂದೆ ಆ ಜನರು ಪಶ್ಚಾತ್ತಾಪವನ್ನು ಪ್ರಕಟಿಸಿ ಕ್ಷಮೆಬೇಡಲು, ರಾಣಿಯು ಅವರನ್ನು ಬಿಡುಗಡೆ ಮಾಡಿದಳು. ಇಷ್ಟಾದರೂ ಆ ನೀಚರ ದುರಾಲೋಚನೆ ಮುಗಿಯಲಿಲ್ಲ; ರಜಪೂತ ಸರದಾರರನ್ನು ತನ್ನೊಡೆಯಳ ರಾಜ್ಯವನ್ನಪಹರಿಸಲಿಕ್ಕೆ ಕರೆದರು. ಆದರೆ ಅಹಲ್ಯಾಬಾಯಿಯ ದಂಡು ಸರ್ವಕಾಲವೂ ಸನ್ನದ್ಧವಾಗಿರುತ್ತಿತ್ತು; ರಜಪೂತರ ದಂಡು ಬಂದು ತನ್ನದೊಂದು ಕೋಟೆಯನ್ನು ತೆಗೆದುಕೊಂಡ ಸುದ್ದಿಯನ್ನು ಕೇಳಿದ ಕೂಡಲೆ ರಾಣಿಯು ತುಕೋಜಿ ಹೋಳಕರನೆಂಬ ಸರದಾರನನ್ನು ೫೦೦೦ ದಂಡಿನೊಡನೆ ಆ ರಜಪೂತರೆದುರಿಗೆ ಕಳಿಸಿ ತಾನೂ ಬೇರೆ ದಂಡು ತಕ್ಕೊಂಡು ಹೋದಳು. ಆದರೆ ಆಕೆಯ ದಂಡು ರಣಭೂಮಿಗೆ ಹೋಗುವ ಪೂರ್ವದಲ್ಲಿ ತುಕೋಜಿಯು ರಜಪೂತರನ್ನು ದಿಕ್ಕಾಪಾಲಾಗಿ ಓಡಿಸಿದನು.

ಈ ಪ್ರಕಾರ ಅಹಲ್ಯಾರಾಣಿಯ ಸಾಮರ್ಥ್ಯವು ಪ್ರಕಟವಾದದ್ದನ್ನು ನೋಡಿ ಕುಚೇಷ್ಟೆಗಾರರು ಗುದ್ದು ಸೇರಿದರು. ಮುಂದೆ ಕಾರಭಾರವು ಸುಯಂತ್ರವಾಗಿ ನಡೆಯಲು, ಠಕ್ಕರೂ ದರೋಡೆಯವರೂ ರಾಜ್ಯದಲ್ಲಿ ಸೇರಿ ಗೋಳಾಟವೆಬ್ಬಿಸಿದರು. ರಾಣಿಯು ಯಶವಂತರಾಯನನ್ನು ಕಳಿಸಿ ತುಸು ದಿವಸದೊಳಗೆ ಆ ಕೊಲೆ ಸುಲಿಗೆಗಾರರನ್ನು ನಿರ್ಮೂಲ ಮಾಡಿಸಿದಳು. ಯಶವಂತರಾಯನ ಪರಾಕ್ರಮಕ್ಕೆ ಸಂತುಷ್ಟಳಾಗಿ ಅಹಲ್ಯಾರಾಣಿಯು ತನ್ನ ಮುಕ್ತಾಬಾಯಿ ಎಂಬ ಮಗಳನ್ನು ಅವನಿಗೆ ಕೊಟ್ಟಳು.

ಈ ಬಗೆಯಾಗಿ ನಾನಾ ಪ್ರಕಾರದ ವಿಘ್ನಗಳನ್ನು ಪರಿಹರಿಸಿ ಅಹಲ್ಯಾರಾಣಿಯು ಮೂವತ್ತು ವರ್ಷ ಧರ್ಮದಿಂದಲೂ ನ್ಯಾಯದಿಂದಲೂ

ಪ್ರಜಾಪಾಲನ ಮಾಡಿ ಸನ್ ೧೭೯೫ನೆಯ ವರ್ಷ ಪರಲೋಕಕ್ಕೆ ತೆರಳಿದಳು. ಅಹಲ್ಯಾಬಾಯಿಯ ಕಾರ್ಯಭಾರ-ಚಾತುರ್ಯ-ಶೌರ್ಯಗಳಿಗಿಂತ ಔದಾರ್ಯವು ಮಿಗಿಲಾದದ್ದಿತ್ತು. ಕೈಬಿಚ್ಚಿ ದಾನ ಮಾಡದೆ ಈ ದಾನಶೂರಳು ಒಂದು ದಿವಸವನ್ನು ಸಹ ಹೋಗಗೊಡುತ್ತಿದ್ದಿಲ್ಲೆಂದು ಆಖ್ಯಾಯಿಕೆಯುಂಟು. ಗಯೆಯಲ್ಲಿ ವಿಷ್ಣುಪಾದಕ್ಕೆ ಈ ಮಹನೀಯಳು ಕಟ್ಟಿಸಿದ ಭವ್ಯವಾದ ಗುಡಿಯು ಈಕೆಯ ಔದಾರ್ಯದ ಸಾಕ್ಷಿಯನ್ನು ಕೊಡುತ್ತದೆ. ಕಾಶಿಯಿಂದ ರಾಮೇಶ್ವರದವರೆಗೆ ದೊಡ್ಡ ದೊಡ್ಡ ಕ್ಷೇತ್ರಗಳಲ್ಲಿ ಅಹಲ್ಯಾರಾಣಿಯ ಅನ್ನಛತ್ರಗಳು ಈಗಲೂ ನಡೆಯುತ್ತವೆ.

---

## ೨೯ನೆಯ ಪಾಠ.

## ಚಾಂದ ಬೀಬಿ.

ಚಾಂದ ಬೀಬಿಯು ಅಹಮ್ಮದನಗರದ ಮುಸಲ್ಮಾನರ ಅರಸು ಮನೆತನಕ್ಕೆ ಸೇರಿದವಳು. ಈಕೆಯು ವಿಜಾಪುರವನ್ನು ಆಳುತ್ತಿದ್ದ ಅಲೀ ಆದಿಲ್‌ಶಹನನ್ನು ಮದುವೆಯಾದಳು.



ಚಾಂದರಾಣಿಯು ಒಳ್ಳೇ ರೂಪವತಿಯು. ಆಕೆಯ ಮೋರೆಯಮೇಲೆ ರಾಜಕಳೆಯು ಹೊಳೆಯುತ್ತಿತ್ತು. ಮುಸಲ್ಮಾನ ಹೆಂಗಸರಂತೆ ಆಕೆಯು ಹೊರಗೆ ಬಂದಾಗೆಲ್ಲ ಮೋರೆಗೆ ಒಂದು ತೆಳುವಾದ ಬುರಿಕೆಯನ್ನು ಹಾಕಿಕೊಳ್ಳುತ್ತಿದ್ದಳು. ಆದರೂ ನೆರೆಯಲ್ಲಿ ಹೋದವರಿಗೆ ಆಕೆಯ ಸುಂದರವಾದ ಮೋರೆಯು

ಸ್ಪಷ್ಟವಾಗಿ ಕಾಣುತ್ತಿತ್ತು. "ಕುದುರೆಯನ್ನು ಏರುವದರಲ್ಲಿ ನಾನು ನಾನು" ಎಂದುಕೊಳ್ಳುವ ಆ ಕಾಲದ ವೀರರು ಸಹ ಆಕೆಗೆ ಸಮಾನ ರಿರಲಿಲ್ಲ. ಯುದ್ಧ ಕಲೆಯನ್ನೂ ಆಕೆಯು ಚೆನ್ನಾಗಿ ಕಲಿತಿದ್ದಳು. ಗಂಡನು ಬೇಟೆಯಾಡಲಿಕ್ಕೆ ಹೋದರೆ ಅವನೊಡನೆ ಹೋಗುತ್ತಿದ್ದಳು. ಅಲೀ ಆದಿಲ್‌ಶಹನ ಆಳಿಕೆಯಲ್ಲಿ ಜರುಗಿದ ಅನೇಕ ಯುದ್ಧಗಳಲ್ಲಿ ಚಾಂದರಾಣಿಯು ಯುದ್ಧಕ್ಕೆ ತಕ್ಕ ಉಡಿಗೆ-ತೊಡಿಗೆಗಳನ್ನು ಹಾಕಿ ಕೊಂಡು ತನ್ನ ಪ್ರೀತಿಯ ಕುದುರೆಯನ್ನೇರಿ, ಯುದ್ಧ ಭೂಮಿಯಲ್ಲಿ ಶಹನ ನೆರೆಯಲ್ಲಿಯೇ ಇರುತ್ತಿದ್ದಳು. ಆದಿಲ್‌ಶಹನಾದರೂ ಚಾಂದ ರಾಣಿಯನ್ನು ಬಹಳ ಪ್ರೀತಿಸುತ್ತಿದ್ದನು. ಆದರೆ ಇವರಿಗೆ ಮಕ್ಕಳಿದ್ದಿಲ್ಲ.

ಕ್ರಿ. ಶ. ೧೫೮೦ರಲ್ಲಿ ಅಲೀ ಆದಿಲ್‌ಶಹನು ಮರಣ ಹೊಂದಿದನು. ತನ್ನ ಮರಣದ ಬಳಿಕ ತನ್ನ ತಮ್ಮನ ಬಾಲಕನು ಶಹನಾಗಬೇಕೆಂದೂ ಅವನು ದೊಡ್ಡವನಾಗುವ ವರೆಗೆ ಚಾಂದರಾಣಿಯು ರಾಜ್ಯಕಾರಭಾರ ವನ್ನು ಸಾಗಿಸಬೇಕೆಂದೂ ಆದಿಲ್‌ಶಹನು ಹೇಳಿದ್ದನು. ಆ ಪ್ರಕಾರ ಆಕೆಯು ರಾಜ್ಯಕಾರಭಾರವನ್ನು ನಡೆಯಿಸಲಾರಂಭಿಸಿದಳು. ಆದರೆ ಆ ಕಾಲದಲ್ಲಿ ವಿಜಾಪುರದ ಮಂತ್ರಿಗಳಲ್ಲಿ ಒಡಕು ಹುಟ್ಟಿದ್ದರಿಂದ, ಸುತ್ತಲಿನ ಮುಸಲ್ಮಾನರು ಮೇಲಿಂದ ಮೇಲೆ ವಿಜಾಪುರದ ಕೋಟೆ ಯನ್ನು ಮುತ್ತಿ ಯುದ್ಧಕ್ಕೆ ನಿಲ್ಲಲಾರಂಭಿಸಿದರು. ಆಗ ರಾಣಿಯು ತಾನೇ ಯುದ್ಧಕ್ಕೆ ನಿಂತು, ವಿಜಾಪುರದ ದಂಡಾಳುಗಳನ್ನು ಹುರಿದುಂ ಬಿಸುವಳು. ಒಮ್ಮೆ ಕೋಟೆಯ ಒಂದು ಭಾಗವನ್ನು ಶತ್ರುಗಳು ಕೆಡ ವಿದರು. ಆದರೆ ಚಾಂದರಾಣಿಯು ಸ್ವಂತವಾಗಿ ನಿಂತು ಜನರಿಗೆ ಉತ್ತೇಜನ ಕೊಡುತ್ತಾ, ಗೋಡೆಯನ್ನು ನೆಟ್ಟಗೆ ಮಾಡಿಸಿ ಯುದ್ಧ ವನ್ನು ಮಾಡತೊಡಗಿದಳು. ಆದರಿಂದ ಶತ್ರುಗಳು ಸೋತು ಮುತ್ತಿಗೆ ಯನ್ನೆತ್ತಿದರು. ಈ ಮೇರೆಗೆ ಕೆಲಕಾಲದಲ್ಲಿ ವಿಜಾಪುರವು ಶತ್ರುಗಳ ಕಾಟದಿಂದ ಪಾರಾಯಿತು.

ಇಬ್ರಾಹಿಮ್ ಆದಿಲ್‌ಶಹನು ದೊಡ್ಡವನಾದ ಬಳಿಕ ರಾಜ್ಯಭಾರ ವನ್ನು ವಹಿಸಿದನು. ಇತ್ತ ಅಹಮ್ಮದನಗರದ ರಾಜ್ಯವು ಒಳಜಗಳ ಗಳಿಂದ ದುರ್ಬಲವಾಗಿತ್ತು. ಆದ್ದರಿಂದ ಅಹಮ್ಮದನಗರದ ಕೆಲವರು ಸರದಾರರು ಚಾಂದರಾಣಿಯನ್ನು ಅಲ್ಲಿಗೆ ಬರಬೇಕೆಂದು ಬೇಡಿಕೊಂಡರು. ಅದೇ ಕಾಲದಲ್ಲಿ ಅಹಮ್ಮದನಗರಕ್ಕೆ ಹೊಸದೊಂದು ಗಂಡಾಂತರವು ಒದಗಿತ್ತು. ದಿಲ್ಲಿಯಲ್ಲಿದ್ದ ಮೊಗಲ್ ಬಾದಶಹನಾದ ಅಕಬರನು ಅಂತಃ ಕಲಹಗಳಿಂದ ದುರ್ಬಲವಾಗಿದ್ದ ಸಣ್ಣಪುಟ್ಟ ರಾಜ್ಯಗಳನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲು ಹೊಂಚುಹಾಕಿಕೊಂಡು ಕುಳಿತಿದ್ದನು. ಆದ್ದರಿಂದ ಅಹಮ್ಮದನಗರದ ಮೇಲೆ ಅವನ ಕಣ್ಣು ಇದ್ದದ್ದು ಗೊತ್ತಾ ಗಿತ್ತು. ಅವನ ಮಗನಾದ ಮುರಾದನು ದೊಡ್ಡ ದಂಡಿನೊಡನೆ ದಕ್ಷಿಣ ಹಿಂದುಸ್ತಾನದಲ್ಲಿದ್ದನು. ಇದನ್ನೆಲ್ಲ ಕಂಡು ಚಾಂದರಾಣಿಯು ಅಹಮ್ಮದ ನಗರದ ಉದ್ಧಾರಕ್ಕೋಸ್ಕರ ಅಲ್ಲಿಗೆ ಹೋದಳು. ಮುರಾದನು ಅಹ ಮ್ಮದನಗರದ ಮೇಲೆ ಬೀಳುವನೆಂದು ಗೊತ್ತಾಯಿತು. ಆಗ ಚಾಂದ ರಾಣಿಯು ಎಷ್ಟು ಸಾರೆ ಹೇಳಿಕಳಿಸಿದರೂ ವಿಜಾಪುರದ ದಂಡಾಳುಗಳು ಸಮಯಕ್ಕೆ ಬಂದು ಮುಟ್ಟಲಿಲ್ಲ. ಹೊರಗಿನಿಂದ ಸಹಾಯವಿಲ್ಲೆಂದು ಚಾಂದರಾಣಿಗೆ ಗೊತ್ತಾಯಿತು. ಆಕೆಯು ಕಾಳು-ಕಡಿಗಳ ಪೂರ್ಣ ಸಿದ್ಧತೆಯನ್ನು ಮಾಡಿಕೊಂಡು, ಮುರಾದನ ಮುತ್ತಿಗೆಯನ್ನು ತಡೆಯಲು ಸಿದ್ಧಳಾದಳು. ಮೊಗಲರ ದಂಡಾಳುಗಳು ಕೋಟೆಯನ್ನು ಅಲ್ಲಲ್ಲಿ ಸುರಂಗಗಳಿಂದ ಹಾರಿಸುವ ಪ್ರಯತ್ನ ನಡಿಸಿದರು. ಆಗ ಶತ್ರುಗಳಿಗೆ ಶರಣು ಹೋಗದೆ ಗತಿಯಿಲ್ಲೆಂದು ಎಷ್ಟೋ ಸರದಾರರು ರಾಣಿಗೆ ಹೇಳಿ ಕೊಂಡರು. ಆದರೆ ರಾಣಿಯು ದೇಹದಲ್ಲಿ ಜೀವವಿರುವ ವರೆಗೆ ಅಹಮ್ಮದ ನಗರದ ವೀರರನ್ನೂ, ವೀರಮಾತೆಯರನ್ನೂ, ಅಬಲೆಯರನ್ನೂ ಕ್ರೂರ ವಾದ ಮೊಗಲ ದಂಡಾಳುಗಳ ಪಾಲು ಮಾಡೆನೆಂದು ಒದರುತ್ತಾ, ಕೈಯಲ್ಲಿ ಸಲಾಕೆಯನ್ನು ಇಟ್ಟುಕೊಂಡು, ಸುರಂಗಗಳನ್ನು ತೆಗೆಯು

ಹಾಕುವ ಕೆಲಸಕ್ಕೆ ಕೈಹಚ್ಚಿ, ಜನರನ್ನು ಹುರಿದುಂಬಿಸುತ್ತಾ ಹಗಲು ರಾತ್ರಿ ಯೆನ್ನದೆ ಒಂದೇ ಸವನೆ ಎಲ್ಲ ಕಡೆಯಲ್ಲಿಯೂ ತಿರುಗುತ್ತಿದ್ದಳು. ಹೀಗಿರಲು ಕಾಣದಿದ್ದ ಒಂದು ಸುರಂಗವು ಡಬ್ಬನೆ ಹಾರಿ, ಒಂದೆಡೆಯಲ್ಲಿ ಕೋಟೆಯ ಗೋಡೆಗೆ ತೂತು ಬಿತ್ತು. ಆದರೂ ಆಕೆಯು ಕಂಗೆಡದೆ—"ಬುರಿಕೆಯ ಹಿಂದೆ ಬರುವವರು ಬನ್ನಿರಿ," ಎಂದು ಒದರುತ್ತಾ, ತಾನು ಮುಂದೆ ಹೋಗಿ ಯುದ್ಧಕ್ಕೆ ನಿಂತಳು. ಇಷ್ಟು ಶೌರ್ಯದಿಂದ ಕಾಯಲ್ಪಟ್ಟ ಇಕ್ಕಟ್ಟಾದ ಮಾರ್ಗದೊಳಗಿಂದ ಮೊಗಲರಿಗೆ ಒಳಗೆ ಹೋಗಲಿಕ್ಕೆ ಧೈರ್ಯವಾಗಲಿಲ್ಲ. ಯುದ್ಧವು ಭರದಿಂದ ಸಾಗಿತು. ಶತ್ರುಗಳ ದಂಡಾಳುಗಳು ಲೆಕ್ಕವಿಲ್ಲದೆ ಸತ್ತರು. ಕಡೆಗೆ ಮೊಗಲರು ಮುತ್ತಿಗೆಯನ್ನೆಬ್ಬಿಸಿ ಓಡಿ ಹೋದರು. ಆಮೇಲೆ ಕೆಲವು ಕಾಲದವರೆಗೆ ಅಹಮ್ಮದನಗರದಲ್ಲಿ ಶಾಂತತೆಯು ನೆಲೆಯಾಗಿತ್ತು. ಆದರೆ ಸ್ವಾರ್ಥಪರಾಯಣರಾದ ಮಂತ್ರಿಗಳು ಮತ್ತೆ ಜಗಳಗಳನ್ನು ಎಬ್ಬಿಸಿದರು. ಹಾಗು ಅಕಬರಬಾದಶಹನು ಮೊಗಲರ ಪರಾಜಯವನ್ನು ಕೇಳಿ ಮತ್ತೆ ಹೊಸ ದಂಡನ್ನು ಶೂರರಾದ ಸೇನಾಪತಿಗಳೊಡನೆ ಕಳಿಸಿದನು. ಕಳೆದ ಯುದ್ಧದಲ್ಲಿ ಅಹಮ್ಮದನಗರದ ಎಷ್ಟೋ ವೀರರು ಇಲ್ಲವಾಗಿದ್ದರು. ಆದ್ದರಿಂದ ಇಷ್ಟು ಬೇಗನೆ ಮತ್ತೆ ಮುತ್ತಿಗೆಯನ್ನು ತಡೆಯುವದು ಅರಿದಾಯಿತು. ಚಾಂದರಾಣಿಯು ವಿಚಾರ ಮಾಡಿ, ಯುದ್ಧಕ್ಕೆ ನಿಂತರೆ ಜಯ ಬರಲಾರದೆಂಬದನ್ನು ಮನಗಂಡು ಹಮಿಾದಖಾನನೆಂಬ ಸರದಾರನನ್ನು ಕರೆದು ಅವನ ಮತವನ್ನು ಕೇಳಿದಳು. ಆದರೆ ಹಮಿಾದಖಾನನು ಮೊದಲೇ ಶತ್ರುಗಳೊಡನೆ ಒಳಸಂಚು ನಡಿಸಿದ್ದಾನೆಂಬದು ರಾಣಿಗೆ ಗೊತ್ತಿದ್ದಿಲ್ಲ. ಆಕೆಯು—"ಖಾನನೇ, ನನ್ನ ಜನರನ್ನೂ ನನ್ನನ್ನೂ ಹೊರಗೆ ಹೋಗಗೊಟ್ಟರೆ ಕೋಟೆಯನ್ನು ಶತ್ರುಗಳಿಗೆ ಒಪ್ಪಿಸಿ ರಕ್ತಪಾತವನ್ನು ತಪ್ಪಿಸಬೇಕೆನ್ನುವೆನು," ಎಂದು ಅವನ ಮತವನ್ನು ಕೇಳಲಾಗಿ ಖಾನನಿಗೆ ಆನಂದವಾಯಿತು. ಅವನು ಈ ಅರ್ಥವ ಆಕೆಯ ಪತ್ರವನ್ನು ತೆಗೆದುಕೊಂಡು, ಸ್ವಲ್ಪ ದೂರ ಹೋಗಿ—"ಘಾತ

ವಾಯಿತು, ವಿಶ್ವಾಸಘಾತ! ಚಾಂದ ಬೀಬಿಯು ಕಿಲ್ಲೆಯನ್ನು ಶತ್ರುಗಳಿಗೆ ಬಿಟ್ಟುಕೊಟ್ಟಳು. ದೀನ್ ದೀನ್, ನನ್ನೊಡನೆ ನಡೆಯಿರಿ. ಆಕೆಯನ್ನು ಕೊಂದ ಬಳಿಕ ಯುದ್ಧಕ್ಕೆ ನಿಲ್ಲುವ," ಎಂದು ಒದರುತ್ತಾ ನಿಂತನು. ಅದರಿಂದ ದಂಡಾಳುಗಳು ಮೋಸ ಹೋಗಿ—ಅಲ್ಲಾ, "ಅಲ್ಲಾ! ದುಷ್ಟ ಚಾಂದಳು! ನಡೆಯಿರಿ, ನಡೆಯಿರಿ! ಬೀಬಿಯ ಈ ಅರಮನೆಗೆ ಹೋಗೋಣ; ಮೊದಲು ಅವಳನ್ನು ತುಂಡರಿಸಬೇಕು," ಎಂದು ಒದರುತ್ತ ಆಕೆಯು ಇದ್ದೆಡೆಗೆ ಹೋದರು. ಆದರೆ ಆಕೆಯನ್ನು ನೋಡಿದ ಕೂಡಲೆ ದಂಡಾಳುಗಳ ಕೈಗಳು ಕಟ್ಟಿದಂತಾದವು. ಆದರೂ ದುಷ್ಟನಾದ ಹಮೀದನು ಮುಂದಕ್ಕೆ ಸಾಗಿ ಆಕೆಯನ್ನು ಕತ್ತಿಯಿಂದ ಇರಿದನು. ಆಗ ಆಕೆಯು—"ದೇವದೂತರು ಕರೆಯುತ್ತಾರೆ. ಇಗೊ ಬಂದೆನು, ಅಲ್ಲಾ! ನಿನ್ನ ಇಚ್ಛೆಯಂತಾಗಲಿ," ಎಂದು ನುಡಿದು ಪ್ರಾಣ ಬಿಟ್ಟಳು. ಈ ಸುದ್ದಿಯನ್ನು ಕೇಳಿ ಜನರೆಲ್ಲ ಮರುಗಿದರು. ಅವರು ಖಾನನನ್ನು ಹಿಡಿದು ನೆರೆಯಲ್ಲಿದ್ದ ಗಿಡದಮೇಲೆ ಗಲ್ಲಿಗೇರಿಸಿದರು. ಅಹಮ್ಮದನಗರವು ಮೊಗಲರ ವಶವಾಯಿತು.

---

## ೩೦ನೆಯ ಪಾಠ.

## ಹರಿಶ್ಚಂದ್ರರಾಜನ ಕಥೆ ಅಥವಾ ವಚನ ಪಾಲಿಸುವಿಕೆ.

ಪೂರ್ವಕಾಲದಲ್ಲಿ ಅಯೋಧ್ಯಾ ಪಟ್ಟಣದಲ್ಲಿ ಹರಿಶ್ಚಂದ್ರನೆಂಬ ಅರಸು ಆಳುತ್ತಿದ್ದನು. ಅವನು ಬಹು ಶೂರನೂ, ಉದಾರನೂ, ನಮ್ರಸ್ವಭಾವದವನೂ ಇದ್ದದ್ದಲ್ಲದೆ, ಕೊಟ್ಟವಚನ ಪಾಲಿಸುವದರಲ್ಲಿ ಒಳ್ಳೆಯ ಹೆಸರಾಗಿದ್ದನು. ಒಂದು ದಿನ ಆ ಅರಸು ಒಡ್ಡೋಲಗದಲ್ಲಿ ಕುಳಿತಿರುವಾಗ ನಾರದ ಮುನಿಗಳು ಅಲ್ಲಿಗೆ ಬಂದರು. ಅವರನ್ನು ಕಂಡು ರಾಜನು ಇದಿರು ಹೋಗಿ ಬಹು ಆದರದಿಂದ ಸತ್ಕರಿಸಲು, ನಾರದರು ಸಂತೋಷಬಟ್ಟು ಅರಸನ ಕೂಡ ಕುಶಲವಾರ್ತೆಯನ್ನಾಡಿ ತಿರುಗಿ ದೇವಲೋಕಕ್ಕೆ

ಹೋದರು. ಆಗ ಅಲ್ಲಿ ದೇವೇಂದ್ರನು—“ಎಲೈ ನಾರದರೇ, ಭೂಲೋಕದಲ್ಲಿ ಏನು ವಿಶೇಷವು?” ಎಂದು ಕೇಳಲು, ನಾರದರು—“ಇಂದ್ರನೇ, ಏನು ಹೇಳಲಿ! ಅಯೋಧ್ಯೆಯಲ್ಲಿ ಹರಿಶ್ಚಂದ್ರನೆಂಬ ಅರಸನನ್ನು ಕಂಡೆನು. ಅವನಿಗೆ ಸಮಾನನಾದ ಸತ್ಯಪ್ರತಿಜ್ಞನನ್ನು ಮೂರು ಲೋಕದಲ್ಲಿಯೂ ಕಾಣೆನು,” ಎನಲು, ಅದಕ್ಕೆ ಇಂದ್ರನೂ ವಸಿಷ್ಠಾದಿ ಋಷಿಗಳೂ ತಲೆದೂಗಿದರು. ಆದರೆ ಅಲ್ಲಿಯೇ ಕುಳಿತಿದ್ದ ವಿಶ್ವಾಮಿತ್ರನಿಗೆ ಮಾತ್ರ ಸಹನವಾಗದೆ—“ಎಲೈ ನಾರದರೆ, ಅವನ ದೊಡ್ಡಸ್ತಿಕೆಯನ್ನು ಏನು ಕೊಚ್ಚುತ್ತೀರಿ? ಅವನ ಸತ್ವಪರೀಕ್ಷೆಯನ್ನು ಒಮ್ಮೆ ನಾನು ಮಾಡಿ ನೋಡುವೆನು. ಅದರಲ್ಲಿ ಅವನ ಸತ್ಯವು ಕೆಡದಿದ್ದರೆ ಇದು ವರೆಗೆ ನಾನು ಮಾಡಿದ ತಪದ ಫಲವನ್ನು ಬಿಟ್ಟುಬಿಡುವೆನು,” ಎಂದು ಪ್ರತಿಜ್ಞೆಯನ್ನು ಮಾಡಿ ಹೊರಟುಹೋದನು. ಇತ್ತ ವಸಿಷ್ಠನು ಅಯೋಧ್ಯೆಗೆ ಬಂದು, ನಡೆದ ಸಂಗತಿಯನ್ನೆಲ್ಲ ರಾಜನಿಗೆ ತಿಳಿಸಿ—“ವಿಶ್ವಾಮಿತ್ರನ ಆಶ್ರಮಕ್ಕೆ ಮಾತ್ರ ನೀನು ಹೋಗಕೂಡದು,” ಎಂದು ಖಂಡಿತವಾಗಿ ಹೇಳಿ ತನ್ನ ಆಶ್ರಮಕ್ಕೆ ತೆರಳಿದನು.

ಆ ಮೇಲೆ ವಿಶ್ವಾಮಿತ್ರನು ಮಾಯೆಯಿಂದ ಹುಲಿಗಳನ್ನು ನಿರ್ಮಿಸಿ, ಹರಿಶ್ಚಂದ್ರನಾಳುತ್ತಿದ್ದ ಕೋಸಲ ದೇಶದ ಪ್ರಜೆಗಳಿಗೆ ಉಪದ್ರವ ಕೊಡುವಂತೆ ಮಾಡಿದನು. ಆಗ ಪ್ರಜೆಗಳು ಬಂದು ರಾಜನಿಗೆ ಮೊರೆಯಿಟ್ಟು—“ಈ ಕ್ರೂರ ಮೃಗಗಳ ಕಾಟದಿಂದ ನಮ್ಮನ್ನು ರಕ್ಷಿಸು,” ಎಂದು ಬಹಳ ದೈನ್ಯದಿಂದ ಬೇಡಿಕೊಂಡರು. ಹರಿಶ್ಚಂದ್ರನು ತನಗೆ ಪ್ರಜೆಗಳನ್ನು ರಕ್ಷಿಸುವದೇ ಮುಖ್ಯ ಧರ್ಮವೆಂದು ತಿಳಿದು, ಬೇಟೆಗೆ ಹೋಗಬೇಕೆಂದು ನಿಶ್ಚಯಿಸಿ, ದಂಡು ತಕ್ಕೊಂಡು ಕಾಡಿಗೆ ಹೋಗಿ, ಆ ಹುಲಿ ಮೊದಲಾದವುಗಳನ್ನು ಸಂಹರಿಸಿ ಪ್ರಜೆಗಳ ಕಷ್ಟವನ್ನು ಪರಿಹರಿಸಿದನು. ಬೇಟೆಯ ದಣುವಾರಿಸಿಕೊಳ್ಳಲಿಕ್ಕೆ ಅವನು ಅಲ್ಲಿಯೇ ಮಲಗಿದ್ದಾಗ, ತನ್ನ ರಾಜ್ಯವನ್ನೆಲ್ಲ

ಒಬ್ಬ ಬ್ರಾಹ್ಮಣನಿಗೆ ದಾನ ಮಾಡಿದಂತೆ ಅವನಿಗೆ ಕನಸು ಬಿತ್ತು. ಇದನ್ನು ಮಂತ್ರಿಗೆ ತಿಳಿಸಲು, ಅವನು—"ಸ್ವಾಮಿ, ಇದು ಕೆಟ್ಟ ಕನಸು. ಇಲ್ಲಿ ಸ್ನಾನವನ್ನು ತೀರಿಸಿಕೊಂಡು ದಾನಧರ್ಮಗಳನ್ನು ಮಾಡಿದರೆ, ಅದರ ದೋಷವು ಪರಿಹಾರವಾಗುವದು," ಎಂದು ಹೇಳಿದ ಮಾತುಗಳನ್ನು ಕೇಳಿ, ಅರಸನು ಸ್ನಾನಕ್ಕೆ ಹೋದನು. ಆಗ ವಿಶ್ವಾಮಿತ್ರನು ಬ್ರಾಹ್ಮಣನ ವೇಷವನ್ನು ತಾಳಿ ಅವನ ಕಡೆಗೆ ಬಂದು—"ಎಲೈ ಅರಸೇ, ಸಂಕಲ್ಪವನ್ನು ಹೇಳುತ್ತೇನೆ; ದಕ್ಷಿಣೆಯನ್ನು ಕೊಡು," ಎಂದು ಕೇಳಲು ಅರಸನು ಅದಕ್ಕೆ ಒಪ್ಪಿಕೊಂಡನು.

ಬಳಿಕ ಬ್ರಾಹ್ಮಣನು ಸಂಕಲ್ಪವನ್ನು ಹೇಳಿ, ಮೂರೂವರೆ ಭಾರ ಸುವರ್ಣವನ್ನು ಬೇಡಿದನು. ಅದಕ್ಕೆ ಅರಸನು—"ತಾವು ಅಯೋಧ್ಯೆಗೆ ದಯಮಾಡಿಸಿದರೆ, ಕೊಡುತ್ತೇನೆ," ಎಂದು ಹೇಳಲು, ಬ್ರಾಹ್ಮಣನು ಸಿಟ್ಟಿಗೆದ್ದು—"ನೀನು ರಾಜ್ಯವನ್ನೆಲ್ಲ ನನಗೆ ದಾನ ಮಾಡಿರುವೆ, ಅಂದ ಮೇಲೆ, ಅಯೋಧ್ಯೆಯಲ್ಲಿ ನಿನ್ನದೇನು ಉಳಿಯಿತು?" ಎನಲು, ಅರಸು ಸುಮ್ಮನೆ ನಿಂತುಕೊಂಡನು. ಆದರೆ ಬ್ರಾಹ್ಮಣನು ದಕ್ಷಿಣೆ ಬೇಡುವದನ್ನು ಬಿಡಲಿಲ್ಲ. ಆಗ ರಾಜನು—"ಬ್ರಾಹ್ಮಣ ಶ್ರೇಷ್ಠರೇ, ಕಾಶೀಪಟ್ಟಣವು ನನ್ನ ರಾಜ್ಯಕ್ಕೆ ಹೊರತಿರುವದರಿಂದ ಅಲ್ಲಿಯ ವರೆಗೆ ಬಂದರೆ, ತಮ್ಮ ದಕ್ಷಿಣೆಯನ್ನು ಮುಟ್ಟಿಸುವೆನು," ಎಂದು ಹೇಳಿದನು. ಅದಕ್ಕೆ ಆ ಬ್ರಾಹ್ಮಣನು ಸಮ್ಮತಿಸಲು, ಹರಿಶ್ಚಂದ್ರನು ಅಯೋಧ್ಯೆಗೆ ಬಂದು, ತಾನು ದಾನ ಕೊಟ್ಟ ರಾಜ್ಯವನ್ನು ಆ ಬ್ರಾಹ್ಮಣರೂಪದಿಂದ ಬಂದ ವಿಶ್ವಾಮಿತ್ರನಿಗೆ ಒಪ್ಪಿಸಿ, ತನ್ನ ಹೆಂಡತಿಯಾದ ತಾರಾಮತಿಯನ್ನೂ ಮಗನಾದ ರೋಹಿದಾಸನನ್ನೂ ಕರಕೊಂಡು, ಉಟ್ಟ ವಸ್ತ್ರದಿಂದಲೇ ಮನೆ ಬಿಟ್ಟು ಹೊರಟನು. ಉದಾರನೂ, ಧರ್ಮಾಚರಣವುಳ್ಳವನೂ, ಸದ್ಗುಣಿಯೂ, ಮಕ್ಕಳೋಪಾದಿಯಲ್ಲಿ ಪ್ರಜೆಗಳನ್ನು ಪರಿಪಾಲಿಸುವವನೂ ಆಗಿರುವ ನಮ್ಮ ಅರಸನಿಗೆ ಇಂಥ ಹೊತ್ತು

ಬಂತಲ್ಲ! ಎನ್ನುತ್ತ ನಗರವಾಸಿಗಳು ಮರಮರನೆ ಮರುಗಿದರು. ಆದರೆ ಮಾಡತಕ್ಕದ್ದೇನು? ಅರಸು ವಚನದೊಳಗೆ ತೊಡಕಿಕೊಂಡಿದ್ದನು.

ಬಳಿಕ ಹರಿಶ್ಚಂದ್ರನು ಅಯೋಧ್ಯೆಯಿಂದ ಹೊರಟು ದಾರಿಯಲ್ಲಿ ಪರಿಪರಿಯ ಕಷ್ಟಗಳನ್ನು ಅನುಭವಿಸಿದರೂ ಸತ್ವಗೆಡದೆ, ಕಾಶಿಗೆ



ಬಂದು ತಲುಪಿದನು. ಅಲ್ಲಿ ಅವನು ಬ್ರಾಹ್ಮಣನಿಗೆ ಕೊಡುತ್ತೇನೆಂದು ಒಪ್ಪಿಕೊಂಡ ದಕ್ಷಿಣೆಯನ್ನು ಹ್ಯಾಗೆ ದೊರಕಿಸಲಿ ಎಂಬ ಯೋಚನೆಯೊಳಗೆ ಬಿದ್ದನು. ಕಡೆಗೆ ಬ್ರಾಹ್ಮಣನ ದಕ್ಷಿಣೆಯನ್ನು ಮುಟ್ಟಿಸುವದಕ್ಕೆ ರಾಯನು ಕಾಶಿಯಲ್ಲಿ ತನ್ನನ್ನೂ ತನ್ನ ಹೆಂಡಿರುಮಕ್ಕಳನ್ನೂ

ಮಾರಿಕೊಳ್ಳಲಿಕ್ಕೆ ಸಹ ಹಿಂದೆಮುಂದೆ ನೋಡಲಿಲ್ಲ. ಒಮ್ಮೆಯಂತೂ ಹರಿಶ್ಚಂದ್ರನು ಹೊಲೆಯನ ಆಳಾಗಿ ಸುಡುಗಾಡನ್ನು ಕಾಯುತ್ತಿರುವಾಗ, ಆತನ ಹೆಂಡತಿ ತಾರಾಮತಿಯು ಮರಣ ಹೊಂದಿದ ತನ್ನ ಮಗನನ್ನು ಅಲ್ಲಿಗೆ ತಂದು ದಹನಮಾಡ ಯೋಚಿಸಿದಳು. ಆಗ ಹರಿಶ್ಚಂದ್ರನು ಭೂಮಿಯ ಕಾಣಿಕೆಯನ್ನು ಕೊಡದೆ ದಹನ ಮಾಡಕೂಡದೆಂದು ಆಕೆಯನ್ನು ಪ್ರತಿಬಂಧಿಸಿದನು. ಕಾಣಿಕೆಯ ಹಣವಿಲ್ಲದ್ದರಿಂದ ಅವರಿಗಾದ ದುಃಖವನ್ನು ವರ್ಣಿಸಲಳವಲ್ಲ! ಆದರೂ ಆ ಮಹಾತ್ಮನು ಮೋಹಕ್ಕೆ ಒಳಗಾಗಿ ತನ್ನ ಕರ್ತವ್ಯದಲ್ಲಿ ತಪ್ಪಲಿಲ್ಲ; ಸತ್ವಕ್ಕೆ ಭಂಗ ತಂದುಕೊಳ್ಳಲಿಲ್ಲ. ಅದರಿಂದ ವಿಶ್ವಾಮಿತ್ರನು ಪ್ರಸನ್ನನಾಗಿ ಸತ್ತ ಮಗನನ್ನು ಬದುಕಿಸಿದ್ದಲ್ಲದೆ ಹರಿಶ್ಚಂದ್ರನಿಗೆ ಆತನ ರಾಜ್ಯವನ್ನೂ ತನ್ನ ತಪಸ್ಸಿನ ಫಲವನ್ನೂ ಕೊಟ್ಟು ಅವರೆಲ್ಲರನ್ನು ಹರಸಿದನು.

---

## ೩೧ನೆಯ ಪಾಠ.

## ಉಗಿ, ಮಂಜು, ಇಬ್ಬನಿ, ಮೋಡ, ಮಳೆ ಮೊದಲಾದವು.

ಅಡಿಗೆ ಮಾಡುವದಕ್ಕಾಗಿ ಒಲೆಯ ಮೇಲಿಟ್ಟ ಪಾತ್ರೆಯೊಳಗಿನ ನೀರು ಕಾಯ್ದು ಉಗಿಯಾಗುವದನ್ನೂ ಆ ಉಗಿಯು ಹವೆಯಲ್ಲಿ ಸೇರಿಕೊಳ್ಳುವದನ್ನೂ ನೀವು ನೋಡಿರುವಿರಿ. ಬೆಂಕಿಯ ಜಳವು ಬಹಳ ವಿದ್ದರೆ ನೀರು ಬಹುಬೇಗ ಉಗಿಯಾಗುತ್ತದೆ. ಕಾದ ಉಗಿಯು ನಮ್ಮ ಕಣ್ಣಿಗೆ ಕಾಣುವದಿಲ್ಲ; ಆದರೆ ಅದಕ್ಕೆ ತಂಪು ತಗಲಿದರೆ ಅದು ನಮಗೆ ಕಾಣಹತ್ತುವದು. ದೊಡ್ಡ ಪಾತ್ರೆಯಲ್ಲಿ ನೀರು ಕಾಸುವಾಗ ಇಂಥ ತಂಪಾದ ಉಗಿಯು ಅದರ ಬಾಯಿಯ ಹತ್ತರ ಕಾಣುವದು. ಬಹಳ ಕಾಯ್ದ ಉಗಿಯು ಅದೃಶ್ಯವಾಗಿದ್ದು, ಮೇಲಕ್ಕೇರಿ ಹವೆಯಲ್ಲಿ ಪಸರಿಸಿಕೊಳ್ಳುವದು.

ನೀರು ತುಂಬಿದ ಒಂದು ಪಾತ್ರೆಯನ್ನು ಒಲೆಯ ಮೇಲಿಡದೆ ಬಿಸಿಲಿನಲ್ಲಿಟ್ಟರೂ ನೀರು ಸಾವಕಾಶವಾಗಿ ಕಡಿಮೆಯಾಗುವದು; ಯಾಕೆಂದರೆ, ಸೂರ್ಯನ ಉಷ್ಣತೆಯಿಂದಲೂ ನೀರು ಉಗಿಯಾಗಿ ಹೋಗುವದು. ಅದೇ ಪಾತ್ರೆಯನ್ನು ಸೂರ್ಯನ ಬಿಸಿಲು ಬೀಳದ ಸ್ಥಳದಲ್ಲಿಟ್ಟರೂ ಅದರೊಳಗಿನ ನೀರು ಬರಬರುತ್ತ ಕಡಿಮೆಯಾಗುವದು. ಅಂಥ ನೀರಿನ ಮೇಲೆ ಪ್ರತ್ಯಕ್ಷವಾಗಿ ಸೂರ್ಯನ ಬಿಸಿಲು ಬೀಳದಿದ್ದರೂ ಹವೆಯ ಉಷ್ಣತೆಯು ಸೂರ್ಯನಿಂದ ಉಂಟಾಗುವದರಿಂದ ಪಾತ್ರೆಯೊಳ



ಗಿನ ನೀರು ಉಗಿಯಾಗಿ ಹೋಗುವದು; ಉಷ್ಣತೆಯು ಹೆಚ್ಚಾದರೆ ನೀರು ತೀವ್ರವಾಗಿ ಉಗಿಯಾಗುವದು; ಕಡಿಮೆಯಾದರೆ ಸಾವಕಾಶವಾಗಿ ಉಗಿಯಾಗುವದು. ಆದ್ದರಿಂದಲೇ ಹಗಲಿಗಿಂತ ರಾತ್ರಿಯಲ್ಲಿಯೂ, ಬೇಸಿಗೆಗಿಂತ ಚಳಿಗಾಲದಲ್ಲಿಯೂ ನೀರು ಸಾವಕಾಶವಾಗಿಯೂ ಕಡಿಮೆ ಪ್ರಮಾಣದಿಂದಲೂ ಉಗಿಯಾಗಿ ಹೋಗುವದು.

ನೀರು ಭೂಮಿಯ ಮೇಲೆ ಯಾವ ಭಾಗದಲ್ಲಿದ್ದರೂ ಸತತವಾಗಿ ಉಗಿಯಾಗುತ್ತಿರುವದು. ಕೆರೆ, ಬಾವಿ, ಹೊಳೆ, ಸಮುದ್ರ ಮೊದಲಾದ

ಜಲಾಶಯಗಳ ನೀರು ಭರದಿಂದ ಉಗಿಯಾಗಿ ಹವೆಯಲ್ಲಿ ಸೇರಿಕೊಳ್ಳು ತ್ತಿರುವದು.

ಕಾದ ಹವೆಯು ವಿರಲವಿರುವದು. ಹವೆಯು ಹೆಚ್ಚೆಚ್ಚು ವಿರಲ ವಾದಂತೆ ಅದಕ್ಕೆ ಹೆಚ್ಚುಹೆಚ್ಚು ಪ್ರಮಾಣದಿಂದ ಉಗಿಯನ್ನು ಹಿಡಿದಿಟ್ಟು ಕೊಳ್ಳುವ ಶಕ್ತಿಯು ಬರುವದು. ಹವೆಯು ತಂಪಾದರೆ ದಡಸಾಗ ಹತ್ತುವ ಕಾರಣ ಅದರಲ್ಲಿದ್ದ ಉಗಿಯಾದರೂ ದಡಸಾಗಹತ್ತುವದು. ನೀರು ಜಳವನ್ನು ನುಂಗಿಕೊಂಡು ಉಗಿಯಾಗುತ್ತದಷ್ಟೇ; ಆದ್ದರಿಂದ ಉಗಿಯಲ್ಲಿಯೂ ತುಸು ಉಷ್ಣತೆಯು ಇದ್ದೇ ಇರುವದು. ಈ ಉಷ್ಣ ತೆಯನ್ನು ತೆಗೆದು ಬಿಟ್ಟರೆ, ಉಗಿಯು ದಡಸಾಗಿ ಕೊನೆಗೆ ನೀರಾಗು ವದು. ಹವೆಯೊಳಗಿನ ಉಷ್ಣತೆಯು ಕಡಿಮೆಯಾದರೆ ಅದು ದಡಸಾ ಗುವದರಿಂದ ಅದರೊಳಗಿನ ಉಗಿಯಾದರೂ ದಡಸಾಗಿ ನಮಗೆ ಕಾಣ ಹತ್ತುವದು. ಈ ಕಾರಣದಿಂದಲೇ ಚಳಿಗಾಲದಲ್ಲಿ ನಮ್ಮ ಬಾಯೊಳ ಗಿಂದ ಬರುವ ಉಗಿಯು ನಮಗೆ ಕಾಣುವದು. ಚಳಿಗಾಲದಲ್ಲಿ ಕೆರೆ ಹೊಳೆಗಳ ಮೇಲ್ಬದಿಯಲ್ಲಿ ಉಗಿಯು ತಂಪಿನಿಂದ ದಡಸಾಗಿ ಹೊಗೆಯಂತೆ ಹಬ್ಬಿಕೊಂಡಿರುವದು.

ಒಮ್ಮೊಮ್ಮೆ ರಾತ್ರಿಯಲ್ಲಾಗಲಿ ಬೆಳಗಿನಲ್ಲಾಗಲಿ ಉಗಿಯು ದಡ ಸಾಗಿ ಹಬ್ಬಿದರೆ ಹೊಗೆಯಂತೆ ಕಾಣುತ್ತದೆ. ಅದಕ್ಕೆ ನಾವು ಮಂಜು ಅನ್ನುತ್ತೇವೆ. ಬಹಳ ಮಂಜು ಬಿದ್ದಾಗ ಎದುರಿಗಿರುವ ಪದಾರ್ಥಗಳು ನಮಗೆ ಕಾಣುವದೇ ಇಲ್ಲ. ಅರಿವೆಗಳ ಮೇಲೆ ಮಂಜು ಬಿದ್ದರೆ ಅವು ತೋಯಿದು ಹೋಗುತ್ತವೆ.

ಚಳಿಗಾಲದಲ್ಲಿ ಮುಂಜಾನೆ ಎಲೆಗಳ ಮೇಲೆಯೂ ಹುಲ್ಲಿನ ಮೇಲೆಯೂ ಮುತ್ತಿನಂಥ ನೀರಹನಿಗಳು ಬಿದ್ದಿರುವಾಗ ನಾವು ಇಬ್ಬ ನಿಯು ಬಿದ್ದಿರುವದೆಂದು ಹೇಳುವೆವು. ಉಗಿಯ ಕಣಗಳು ಅತಿ ಸೂಕ್ಷ್ಮ ವಾಗಿರುತ್ತವೆ. ಇಂಥ ಹಲವು ಕಣಗಳು ಒಟ್ಟುಗೂಡಿ, ತಂಪು ತಗಲು

ವದರಿಂದ ನೀರಿನ ರೂಪವನ್ನು ಹೊಂದಿ, ಇಬ್ಬನಿಯ ಹನಿಗಳಾಗಿ ಮುತ್ತಿನಂತೆ ಕಾಣುತ್ತವೆ.

ಉಗಿಯು ಹವೆಗಿಂತ ಹಗುರಿರುವದರಿಂದ ಮೇಲಕ್ಕೇರುವದು. ಬಹಳ ಉಗಿಯು ಹವೆಯಲ್ಲಿ ಬಹು ಎತ್ತರದವರೆಗೆ ಏರಲು ಅದಕ್ಕೆ ತಂಪು ತಗಲುವದರಿಂದ ಮೋಡಗಳಾಗುವವು. ಹವೆಯೊಳಗಿನ ಸೆಕೆಯು ಹೆಚ್ಚಾದರೆ ಈ ಮೋಡಗಳು ಇಲ್ಲವಾಗುತ್ತವೆ. ಆದರೆ ಬಹಳ ತಂಪಾಗಿ ಇವು ನೀರಿನ ರೂಪವನ್ನು ಹೊಂದಿದ್ದಾದರೆ ಅದನ್ನು ಎತ್ತಿ ಹಿಡಿಯುವ ಶಕ್ತಿಯು ಹವೆಗೆ ಇಲ್ಲದ್ದರಿಂದ, ಆ ನೀರು ನೆಲದಮೇಲೆ ಬೀಳುವದು. ಮುಗಿಲಿನಿಂದ ಬೀಳುವ ಆ ನೀರಿಗೆ ನಾವು ಮಳೆ ಎನ್ನುತ್ತೇವೆ. ಅತಿಶಯ ತಂಪು ತಗಲಿದಾಗ ಆ ನೀರು ಗಡ್ಡೆಗಟ್ಟುವದು. ಆಗ ಮಳೆಯ ಬದಲಾಗಿ ಆಣಿಕಲ್ಲೂ ಹಿಮವೂ ಬೀಳುವವು. ಚಳಿನಾಡುಗಳಲ್ಲಿ ಮೇಲಿಂದ ಮೇಲೆ ಹಿಮವು ಬೀಳುತ್ತದೆ. ಇದರಿಂದ ಉಗಿ, ಮಂಜು, ಇಬ್ಬನಿ, ಮೋಡ, ಮಳೆ, ಆಣಿಕಲ್ಲು, ಹಿಮ ಇವೆಲ್ಲ ನೀರಿನ ಬೇರೆ ಬೇರೆ ರೂಪಗಳೇ ಎಂದು ನಿಮಗೆ ಗೊತ್ತಾಗುವದು.

---

## ೩೨ನೆಯ ಪಾಠ.

## ಪೃಥ್ವಿಯೂ, ಅದರ ಆಕಾರವೂ, ಮಹತ್ವವೂ, ಹಗಲು-ರಾತ್ರಿಗಳೂ.

ನಾವು ಒಂದು ಗೋಲದ ಮೇಲೆ ವಾಸಿಸುತ್ತೇವೆ; ಹಾಗು ಓಡಾಡುತ್ತೇವೆ. ಅದಕ್ಕೆ ಪೃಥ್ವಿಯೆಂಬ ಹೆಸರು. ಅದರ ಮೇಲ್ಬದಿಯಲ್ಲಿ ಹಲವು ದೇಶಗಳೂ ಪರ್ವತಗಳೂ ಮಹಾಸಾಗರಗಳೂ ದೊಡ್ಡ ದೊಡ್ಡ ಹೊಳೆಗಳೂ ಬೈಲುಗಳೂ ಇರುವವು. ಒಂದು ದೊಡ್ಡ ಬೈಲೊಳಗೆ ನಿಂತು ಸುತ್ತುಮುತ್ತು ನೋಡಿದರೆ, ಪೃಥ್ವಿಯೂ ಆಕಾಶವೂ ಒಂದಕ್ಕೊಂದು ಮುಟ್ಟಿದಂತೆ ಕಾಣುವವು. ಬಹು ದೂರದಲ್ಲಿರುವ ಗಿಡಗಳ

ತುದಿಗಳು ಮಾತ್ರ ಕಾಣುವವು. ನಾವು ಬಳಿಗೆ ಹೋದಂತೆ ಬೊಡ್ಡಿಗಳು ನಮ್ಮ ಕಣ್ಣಿಗೆ ತೋರುವವು.

ನಾವು ಸಮುದ್ರದ ದಂಡೆಯ ಮೇಲೆ ನಿಂತು ದೂರದಿಂದ ಬರುತ್ತಿರುವ ಹಡಗಗಳನ್ನು ನೋಡಿದರೆ ಮೊದಲು ಪಟಸ್ತಂಭದ ತುದಿಗಳು ಮಾತ್ರ ಕಾಣುವವು. ಅನಂತರ ಹಡಗಗಳು ಸಮೀಪಕ್ಕೆ ಬಂದ ಹಾಗೆ ಅವುಗಳ ಕೆಳಗಿನ ಭಾಗಗಳು ಕಾಣಹತ್ತುವವು. ಹೊಗೆಬಂಡಿಯ ಮಾರ್ಗವು ಸಮವಾದ ನೆಲದ ಮೇಲೆ ಉದ್ದಕ್ಕೆ ಹೋಗಿದ್ದರೂ ಅದು ಬಹಳ ದೂರ ನಮಗೆ ಕಾಣುವದಿಲ್ಲ.

ಹೀಗಾಗುವ ಕಾರಣವೇನೆಂದರೆ, ಪೃಥ್ವಿಯ ಮೇಲ್ಭಾಗವೂ ಸಮುದ್ರದ ಮೇಲ್ಭಾಗವೂ ಸಮವಾಗಿರುವುದಿಲ್ಲ. ಇವುಗಳ ಮೇಲ್ಮೈಯು ಡುಬರಿಯಾಗಿರುವದರಿಂದಲೇ ದೂರದ ಪದಾರ್ಥಗಳು ಹೀಗೆ ಕಾಣುವವು. ನಾವು ಆಕಾಶದಲ್ಲಿ ಬಹಳ ಎತ್ತರದ ಮೇಲೆ ಹೋಗಿ ಅಲ್ಲಿಂದ ಭೂಮಿಯನ್ನು ನೋಡಿದರೆ, ಅದು ಕಿತ್ತಳೆಹಣ್ಣಿನಂತೆ ದುಂಡಗೆ ಕಾಣುವದು. ಆದರೆ ಪೃಥ್ವಿಯು ಕಿತ್ತಳೆಹಣ್ಣಿಗಿಂತ ಬಹು ದೊಡ್ಡದಿರುವುದರಿಂದ ಅದರ ಗೋಲರೂಪವು ನಮಗೆ ಕಾಣುವದಿಲ್ಲ. ಅದು ಸಮವಿರುವಂತೆ ತೋರುವದು. ನಾವು ಪೃಥ್ವಿಯ ಮೇಲಿರುವ ಒಂದು ಸ್ಥಳದಿಂದ ಹೊರಟು ದಿಕ್ಕನ್ನು ಬದಲಿಸದೆ ಪರ್ಯಟನ ಮಾಡಿದರೆ, ತಿರುಗಿ ಹೊರಟ ಸ್ಥಳಕ್ಕೇ ಬರುವೆವು. ಪೃಥ್ವಿಯು ಗೋಲವಿರುವದೇ ಇದರ ಕಾರಣವು. ಕಿತ್ತಳೆಹಣ್ಣಿನ ಹೊಟ್ಟೆಯೊಳಗೆ ನಟ್ಟನಡುವೆ ಹಾಯುವಂತೆ ಒಂದು ಸೂಜಿಯನ್ನು ಚುಚ್ಚಬೇಕಾದರೆ ಮೂರು ಇಲ್ಲವೆ ನಾಲ್ಕು ಇಂಚು ಸೂಜಿಯಿದ್ದರೆ ಸಾಕು. ಆದರೆ ದುಂಡಗಿರುವ ಪೃಥ್ವಿಯ ಹೊಟ್ಟೆಯೊಳಗೆ ನಟ್ಟ ನಡುವೆ ಹಾಯುವಂತೆಯೂ ಅದರ ಎರಡೂ ಮಗ್ಗಲು ಪೃಷ್ಠ ಭಾಗಕ್ಕೆ ಕೂಡುವಂತೆಯೂ ಒಂದು ರೇಖೆಯನ್ನು ತೆಗೆದರೆ, ಅದರ ಆಳತೆ ೮೦೦೦ ಮೈಲು ಆಗುವದು. ಕೆಲವು ಉಗಿಹಡಗಗಳು ಹಗಲು

ರಾತ್ರಿ ನಡೆದು ದಿವಸಕ್ಕೆ ೩೦೦ ಮೈಲು ಹೋಗುತ್ತವೆ. ಪೃಥ್ವಿಯ ಒಂದು ಪ್ರದಕ್ಷಿಣೆಯನ್ನು ಮಾಡಬೇಕಾದರೆ ಇಂಥ ಹಡಗಗಳಿಗೆ ಎರಡೂ ಮುಕ್ಕಾಲು ತಿಂಗಳು ಹತ್ತುವವು.

ಇಕೋ ಇದೊಂದು ಕಿತ್ತಳೆಹಣ್ಣು; ಇದರ ಹೊಟ್ಟೆಯೊಳಗೆ ನಟ್ಟ ನಡುವೆ ಹಾಯ್ದು ಆಚೇಮಗ್ಗಲು ಪಾರಾಗುವಂತೆ ಒಂದು ಡಬ್ಬಣವನ್ನು ಚುಚ್ಚೋಣ. ಇದನ್ನೂ ಒಂದು ದೀಪವನ್ನೂ ತಕ್ಕೊಂಡು ಕತ್ತಲೇ ಕೋಣೆಯೊಳಗೆ ಹೋಗೋಣ. ಡಬ್ಬಣದ ಒಂದು ತುದಿಯನ್ನು ದೀಪದ ಎದುರಿಗೆ ನೆಟ್ಟೂರಿಕೆಯಿಂದ ಹಿಡಿಯುತ್ತೇನೆ. ಈಗ ನೋಡಿರಿ; ಕಿತ್ತಳೆಹಣ್ಣಿನ ಅರ್ಧಭಾಗವು ಬೆಳಕಿನಲ್ಲಿರುವದು; ಉಳಿದ ಅರ್ಧ ಭಾಗವು ಕತ್ತಲೆಯಲ್ಲಿರುವದು. ಇನ್ನು ಡಬ್ಬಣವನ್ನು ಸಾವಕಾಶವಾಗಿ ತಿರುಗಿಸುವೆನು. ನೋಡಿರಿ, ಕಿತ್ತಳೆಹಣ್ಣು ತಿರುಗಹತ್ತುವದು. ಬೆಳಕಿನಲ್ಲಿದ್ದ ಭಾಗಗಳು ಕ್ರಮಕ್ರಮವಾಗಿ ಕತ್ತಲೆಯಲ್ಲಿಯೂ ಕತ್ತಲೆಯಲ್ಲಿದ್ದ ಭಾಗಗಳು ಬೆಳಕಿನಲ್ಲಿಯೂ ಹಾಯ್ದುಹೋಗುವವು.



ನಾವು ವಾಸಿಸುವ ಪೃಥ್ವಿಯಾದರೂ ಇದೇ ಪ್ರಕಾರ ತಿರುಗುತ್ತದೆ. ಆದರೆ ಅದರ ಹೊಟ್ಟೆಯೊಳಗೆ ಡಬ್ಬಣವು ಮಾತ್ರ ಇಲ್ಲ. ಆದರೆ ಮೇಲಿನದೊಂದು ಕೆಳಗಿನದೊಂದು ಹೀಗೆ ಎರಡು ತುದಿಗಳನ್ನು ಜೋಡಿಸುವ ರೇಷೆಯುಂಟೆಂದು ತಿಳಿದರೆ ಆ ರೇಷೆಯ ಸುತ್ತಲು ಪೃಥ್ವಿಯು

ಸೂರ್ಯನ ಎದುರಿಗೆ ತಿರುಗುತ್ತದೆನ್ನಬಹುದು. ಹೀಗೆ ಪೃಥ್ವಿಯು ಒಂದು ಪ್ರದಕ್ಷಿಣೆಯನ್ನು ಮುಗಿಸಲಿಕ್ಕೆ ಇಪ್ಪತ್ತುನಾಲ್ಕು ತಾಸುಗಳು ಬೇಕಾಗುವವು. ಕಿತ್ತಳೆಹಣ್ಣು ತಿರುಗುವಾಗ ಅದರ ಅರ್ಧಭಾಗವು ಬೆಳಕಿನಲ್ಲಿಯೂ ಉಳಿದ ಅರ್ಧಭಾಗವು ಕತ್ತಲೆಯಲ್ಲಿಯೂ ಇರುವ ದಸ್ತೇ; ಹಾಗೆಯೇ ಸೂರ್ಯಪ್ರಕಾಶವು ಬಿದ್ದಿರುವ ಪೃಥ್ವಿಯ ಅರ್ಧ ಭಾಗದಲ್ಲಿ ಹಗಲೂ ಕತ್ತಲೆಯಲ್ಲಿರುವ ಉಳಿದ ಅರ್ಧಭಾಗದಲ್ಲಿ ರಾತ್ರಿ ಯೂ ಇರುವವು.

ಹೊಗೆಬಂಡಿಯು ಹೋಗುವಾಗ ಅದರ ಎರಡೂ ಬದಿಗಳಲ್ಲಿ ಪೃಥ್ವಿಯ ಮೇಲಿರುವ ಗಿಡಗಳು ಗಾಡಿಯು ಹೋಗುವ ದಿಕ್ಕಿಗೆ ವಿರುದ್ಧ ವಾಗಿ ಓಡುವಂತೆ ಕಾಣುವವು. ಇದೇ ಪ್ರಕಾರ ಪೃಥ್ವಿಯು ಪಶ್ಚಿಮ ದಿಂದ ಪೂರ್ವಕ್ಕೆ ತಿರುಗುವದರಿಂದ ಸೂರ್ಯನು ಪೂರ್ವದಿಂದ ಪಶ್ಚಿ ಮದ ಕಡೆಗೆ ಹೋಗುವಂತೆ ನಮಗೆ ತೋರುವನು.

---

## ೨೨ನೆಯ ಪಾಠ.

## ಪೃಥ್ವಿಯ ವಾರ್ಷಿಕ ಪ್ರದಕ್ಷಿಣೆಯೂ ಋತುಗಳೂ.

ಆಕಾಶದಲ್ಲಿ ಥಳಥಳಿಸುವ ಒಂದು ದೊಡ್ಡ ನಕ್ಷತ್ರವನ್ನು ರಾತ್ರಿ ಯಲ್ಲಿ ಗೊತ್ತು ಮಾಡಿಟ್ಟ ಹೊತ್ತಿಗೆ ಒಮ್ಮೆ ನೋಡಿ, ಹತ್ತು ಹದಿನೈದು ದಿವಸಗಳಾದ ಬಳಿಕ ಅದೇ ಹೊತ್ತಿಗೆ ಅದನ್ನು ಮತ್ತೆ ನೋಡಿದರೆ ನಮಗೆ ಏನು ಕಾಣುವದು? ಒಂದು ದಿನ ರಾತ್ರಿ ಎಂಟು ಹೊಡೆದಾಗ ಅದು ಕ್ಷಿತಿಜದ ಮೇಲೆ ಮೂಡುತ್ತಿರುವದು. ಹದಿನೈದು ದಿವಸಗಳಾದ ಬಳಿಕ ಅದು ಕ್ಷಿತಿಜವನ್ನು ಬಿಟ್ಟು ಆಕಾಶದಲ್ಲಿ ಸ್ವಲ್ಪ ಮೇಲಕ್ಕೇರಿರು ವದು. ಒಂದು ತಿಂಗಳಾದ ಬಳಿಕ ಅದು ಇನ್ನೂ ಹೆಚ್ಚು ಮೇಲೆ ಕಾಣುವದು. ಮೂರುತಿಂಗಳಾದ ಬಳಿಕ ಅದೇ ಹೊತ್ತಿಗೆ ಅದನ್ನು ನೋಡಿದರೆ ಅದು ನೆಟ್ಟಗೆ ನಮ್ಮ ನೆತ್ತಿಯ ಮೇಲೆ ಕಾಣುವದು. ಆರು

ತಿಂಗಳಾದ ಮೇಲೆ ಅದೇ ಹೊತ್ತಿಗೆ ಅದು ಮುಳುಗುತ್ತಿರುವದನ್ನು ಕಾಣಬಹುದು. ಮುಂದೆ ಕೆಲವು ತಿಂಗಳ ವರೆಗೆ ರಾತ್ರಿ ಎಂಟು ಹೊಡೆದಾಗ ಅದು ಕಾಣುವದೇ ಇಲ್ಲ. ಕಡೆಗೆ ಒಂದು ವರ್ಷವಾದ ಬಳಿಕ ಅದನ್ನು ನೋಡಿದರೆ ಸರಿಯಾಗಿ ಒಂದು ವರ್ಷದ ಹಿಂದೆ ಅದು ಮೂಡುತ್ತಿದ್ದ ಸ್ಥಳದಲ್ಲಿಯೇ ಮತ್ತೆ ಮೂಡುತ್ತಿರುವದನ್ನು ಕಾಣಬಹುದು.

ಹೀಗಾಗುವ ಕಾರಣವನ್ನು ಕಂಡುಹಿಡಿಯುವ. ಒಂದು ದೊಡ್ಡ ಕೋಣೆಯ ಗೋಡೆಗಳಿಗೆ ಸ್ವಲ್ಪ ಅಂತರ ಬಿಟ್ಟು ಸಾಲಾಗಿ ನಿಲುಗನ್ನಡಿಗಳನ್ನು ಹಾಕಿರುವರೆಂದು ತಿಳಿಯೋಣ. ಆ ಕೋಣೆಯ ನಡುವೆ ದುಂಡಗಿನ ಒಂದು ದೊಡ್ಡ ಮೇಜು ಇರುವದು. ಇದರ ಸುತ್ತಲು ಒಬ್ಬ ಹುಡುಗೆಯು ತಿರುಗುವಳು. ಮೇಜಿನ ಅಂಚಿನ ಕಡೆಗೆ ಮೋರೆ ಮಾಡಿ ನೆಟ್ಟಗೆ ಗೋಡೆಯನ್ನು ನೋಡುತ್ತ ಅವಳು ತಿರುಗಿದರೆ, ಬೇರೆ ಬೇರೆ ಕನ್ನಡಿಗಳು ಅವಳ ಕಣ್ಣಿನ ಮುಂದೆ ಬರುವವು. ಬಳಿಕ ಇವೇ ಕನ್ನಡಿಗಳು ಕ್ರಮ ಕ್ರಮವಾಗಿ ಅವಳ ಬೆನ್ನ ಹಿಂದೆ ಆಗುವವು. ಪೂರ್ವಕ್ಕೆ ಮೋರೆ ಮಾಡಿದಾಗ ಅವಳ ಎದುರಿಗೆ ಇದ್ದ ಕನ್ನಡಿಯು ಅವಳು ತಿರುಗುತ್ತ ಪಶ್ಚಿಮದ ಕಡೆಗೆ ಮೋರೆ ಮಾಡಿದಾಗ ನೆಟ್ಟಗೆ ಅವಳ ಬೆನ್ನ ಹಿಂದೆ ಆಗುವದೆಂದು ಕಾಣುವದು.

ಈ ಹುಡುಗೆಯು ಪೃಥ್ವಿಯೆಂದೂ, ಮೇಜಿನ ಅಂಚೇ ಸೂರ್ಯನ ಸುತ್ತಲು ತಿರುಗುವಾಗ ದುಂಡಗೆ ಹೋಗುವ ದಾರಿಯೆಂದೂ, ನಿಲುಗನ್ನಡಿಗಳೇ ನಕ್ಷತ್ರಗಳೆಂದೂ ಎಣಿಸಿದರೆ, ಪೃಥ್ವಿಯು ಒಂದು ವರ್ಷದಲ್ಲಿ ಸೂರ್ಯನ ಸುತ್ತಲು ಒಂದು ಪ್ರದಕ್ಷಿಣೆಯನ್ನು ಹ್ಯಾಗೆ ಮಾಡುವದೆಂಬದು ಸ್ಪಷ್ಟವಾಗುವದು. ಈ ಕಾರಣದಿಂದ ಈ ಹೊತ್ತು ರಾತ್ರಿ ಎಂಟು ಹೊಡೆದಾಗ ಪೂರ್ವದಲ್ಲಿ ಮೂಡುತ್ತಿರುವ ನಕ್ಷತ್ರಗಳು ಆರು ತಿಂಗಳಾದ ಬಳಿಕ ಅದೇ ಹೊತ್ತಿಗೆ ಪಶ್ಚಿಮದಲ್ಲಿ ಮುಳುಗುತ್ತಿರುವವು. ಮುಂದೆ ಆರು ತಿಂಗಳು ಕಳೆದ ಬಳಿಕ ಅವು ಮತ್ತೆ ಪೂರ್ವದಲ್ಲಿ ಮೂಡು

ತ್ತಿರುವವು. ಇದಲ್ಲದೆ ಪೃಥ್ವಿಗೆ ಇನ್ನೊಂದು ಗತಿಯು ಉಂಟೆಂದೂ, ಆ ಗತಿಯ ಮೂಲಕ ಹಗಲು-ರಾತ್ರಿಗಳು ಆಗುತ್ತವೆಂದೂ ನೀವು ಹಿಂದಿನ ಪಾಠದಲ್ಲಿ ಕಲಿತಿರುವಿರಿ. ಬೊಗರೆಯು ಚೂಪಾದ ಕಬ್ಬಿಣದ ಮೊಳೆಯ ಮೇಲೆ ತನ್ನ ಮೈಸುತ್ತ ತಿರುಗುವದಲ್ಲದೆ ನೆಲಗಟ್ಟಿನ ಮೇಲೆ ದುಂಡಗೆ ತಿರುಗುತ್ತದೆಂಬದನ್ನು ನೀವು ನೋಡಿರುವಿರಷ್ಟೇ. ಹಾಗಾದರೆ ಒಂದೇ ಕಾಲದಲ್ಲಿ ಪೃಥ್ವಿಗೆ ಎರಡು ಗತಿಗಳು ಹ್ಯಾಗೆ ಉಂಟಾಗುತ್ತ ವೆಂಬದು ನಿಮಗೆ ಸುಲಭವಾಗಿ ತಿಳಿಯುವದು.

ವರ್ಷದ ಕೆಲವು ತಿಂಗಳಲ್ಲಿ ಬಹಳ ಸೆಕೆಯೂ ಕೆಲವು ತಿಂಗಳಲ್ಲಿ ಬಹಳ ಚಳಿಯೂ ಇರುವದು. ಇದಲ್ಲದೆ ಮಿಕ್ಕ ಋತುಗಳಿಗಿಂತ ಬೇಸಿಗೆ ಯಲ್ಲಿ ಹೆಚ್ಚು ಬಿಸಿಲೂ ಚಳಿಗಾಲದಲ್ಲಿ ಹೆಚ್ಚು ಚಳಿಯೂ ಇರುವವು. ಇದರ ಕಾರಣವೇನಿರಬಹುದು? ಒಂದು ದೀಪದ ಜ್ಯೋತಿಗೆ ಸ್ವಲ್ಪ ಯಾಸಿಯ ಮೇಲೆ ನಮ್ಮ ಅಂಗೈಯನ್ನು ಹಿಡಿದರೆ ಬೆರಳುಗಳ ತುದಿಗೆ ಉಳಿದ ಭಾಗಗಳಿಗಿಂತ ಹೆಚ್ಚು ಜಳ ಬಡಿಯುವದು. ಯಾಕಂದರೆ ಬೆರ ಳುಗಳ ತುದಿಯ ಮೇಲೆ ಜ್ಯೋತಿಯ ಕಿರಣಗಳು ನೆಟ್ಟಗೆ ಬೀಳುವವು. ಅಂಗೈಯ ನಡುವೆ ಕಡಿಮೆ ಜಳ ಹತ್ತುವದು. ತೀರ ಕೆಳಗಿನ ಭಾಗಗಳಿಗೆ ತೀರ ಸ್ವಲ್ಪ ಜಳ ತಾಕುವದು. ಯಾಕಂದರೆ, ಈ ಭಾಗಗಳ ಮೇಲೆ ಜ್ಯೋತಿಯ ಕಿರಣಗಳು ಯಾಸಿಯಾಗಿ ಬೀಳುವವು.

ಯಾಸಿಯ ಮೇಲೆ ಹಿಡಿದ ಅಂಗೈಯಂತೆ ಪೃಥ್ವಿಯು ಸೂರ್ಯನ ಸುತ್ತಲು ಒಲಿದು ತಿರುಗುತ್ತದೆ. ಈ ಮೂಲಕ ಕೆಲವು ಕಾಲದ ವರೆಗೆ ಪೃಥ್ವಿಯ ಉತ್ತರ ಧ್ರುವವೂ, ಕೆಲವು ಕಾಲದ ವರೆಗೆ ದಕ್ಷಿಣ ಧ್ರುವವೂ ಸೂರ್ಯನ ಕಡೆಗೆ ಒಲಿದಿರುವವು. ಉತ್ತರ ಧ್ರುವವು ಸೂರ್ಯನ ಕಡೆಗೆ ಒಲಿದಿರುವಾಗ ಪೃಥ್ವಿಯ ಉತ್ತರದ ಭಾಗಗಳ ಮೇಲೆ ಸೂರ್ಯನ ಕಿರಣಗಳು ಲಂಬವಾಗಿ ಬೀಳುತ್ತವೆ. ಆದರಿಂದ ಅಲ್ಲಿ ಸೆಕೆ ಹೆಚ್ಚಿರು ವದು, ಅಂದರೆ ಬೇಸಿಗೆಕಾಲವಿರುವದು. ಇದೇ ಕಾಲದಲ್ಲಿ ದಕ್ಷಿಣದ ಭಾಗ

ಗಳ ಮೇಲೆ ಸೂರ್ಯನ ಕಿರಣಗಳು ವಕ್ರವಾಗಿ ಬೀಳುವದರಿಂದ ಅಲ್ಲಿ ಸೆಕೆ ಕಡಿಮೆ ಇರುವದು, ಅಂದರೆ ಚಳಿಗಾಲವಿರುವದು. ಇದಲ್ಲದೆ ಉತ್ತರ ಧ್ರುವವು ಸೂರ್ಯನ ಕಡೆಗೆ ಒಲೆದಾಗ ಉತ್ತರ ಗೋಲಾರ್ಧದ ಅರ್ಧಕ್ಕಿಂತ ಹೆಚ್ಚು ಭಾಗದಲ್ಲಿ ಪ್ರಕಾಶವು ಬೀಳುವದು. ಆದದರಿಂದ ಆ ಭಾಗಗಳಲ್ಲಿ ರಾತ್ರಿಗಿಂತ ಹಗಲು ಬಹಳ ಹೊತ್ತಿರುವದು. ಇದೇ ಕಾರಣ ದಿಂದ ಈ ಭಾಗಗಳಲ್ಲಿ ಬೇಸಿಗೆಯಲ್ಲಿ ಹಗಲು ದೊಡ್ಡದೂ ರಾತ್ರಿಯು ಸಣ್ಣದೂ ಇರುವವು. ಆದರೆ ಅದೇ ಚಳಿಗಾಲದಲ್ಲಿ ರಾತ್ರಿಯು ದೊಡ್ಡದೂ ಹಗಲು ಸಣ್ಣದೂ ಇರುವವು.



ಪೃಥ್ವಿಯ ದಕ್ಷಿಣ ಧ್ರುವವು ಸೂರ್ಯನ ಕಡೆಗೆ ಒಲೆದಾಗ ಉತ್ತರ ಗೋಲಾರ್ಧದಲ್ಲಿ ಚಳಿಗಾಲವೂ ದಕ್ಷಿಣ ಗೋಲಾರ್ಧದಲ್ಲಿ ಬೇಸಿಗೆಯೂ ಇರುವವು. ಪೃಥ್ವಿಯು ಅಕ್ಷದ ಒಲವನ್ನು ಬದಲಿಸದೆ ಸೂರ್ಯನ ಸುತ್ತಲು ವರ್ಷಕ್ಕೆ ಒಂದು ಪ್ರದಕ್ಷಿಣೆಯನ್ನು ಮಾಡುವದೆಂದೂ, ಇದ ರಿಂದ ಋತುಗಳೂ ಸಣ್ಣ ದೊಡ್ಡ ಹಗಲು ರಾತ್ರಿಗಳೂ ಆಗುತ್ತವೆಂದೂ ನೀವು ಕಲಿತಿರಿ. ವರ್ಷದಲ್ಲಿ ಎರಡು ದಿವಸ ಮಾತ್ರ ಪೃಥ್ವಿಯ ಎಲ್ಲ ಭಾಗಗಳಲ್ಲಿಯೂ ಹಗಲು-ರಾತ್ರಿಗಳು ಸಮವಿರುತ್ತವೆ. ಈ ದಿವಸಗಳು ಮಾರ್ಚ ತಿಂಗಳಲ್ಲಿಯೂ ಸಪ್ಟಂಬರ ತಿಂಗಳಲ್ಲಿಯೂ ಬರುತ್ತವೆ.

## ೩೮ನೆಯ ಪಾಠ.

# ಋತುಗಳ ವರ್ಣನೆ.

ಈರಪ್ಪನೆಂಬ ಒಕ್ಕಲಿಗನು ಬೇಸಿಗೆಯಲ್ಲಿ ಹುಬ್ಬಳ್ಳಿಯ ಒಬ್ಬ ವ್ಯಾಪಾರಸ್ಥನ ಬಳಿಗೆ ಒಂದು ಚಕ್ಕಡಿ ತುಂಬ ಮಾವಿನ ಹಣ್ಣುಗಳನ್ನು ಒಯ್ದನು. ರಾತ್ರಿ ಊಟವಾದ ಬಳಿಕ ಎಲ್ಲರೂ ಉಪ್ಪರಿಗೆಯ ಮೇಲೆ ಮಾತಾಡುತ್ತ ಕುಳಿತರು. ಆ ವ್ಯಾಪಾರಸ್ಥನ ಮಗಳಿಗೆ ಒಕ್ಕಲಿಗನ ಹೊಲವನ್ನು ನೋಡಬೇಕೆಂದು ಬಹಳ ಅಪೇಕ್ಷೆ ಇತ್ತು. ಇದನ್ನು ಆಕೆಯು ಒಕ್ಕಲಿಗನಿಗೆ ತಿಳಿಸಿದಳು.

ಈರಪ್ಪ—ತಂಗೀ, ಬೇಸಿಗೆಯಲ್ಲಿ ನಮ್ಮ ಹಳ್ಳಿಯಲ್ಲಿ ನೋಡುವಂಥದೇನೂ ಇರುವದಿಲ್ಲ.

ಮಗಳು—ನಿಮ್ಮ ಹಳ್ಳಿಯ ಜನರು ಬೇಸಿಗೆಯಲ್ಲಿ ಏನೂ ಮಾಡುವದಿಲ್ಲೇನು?

ಒಕ್ಕಲಿಗ—ವರ್ಷದಲ್ಲೆಲ್ಲ ಕೆಲಸವು ನಡೆದೇ ಇರುವದು. ಈಗ ಬೇಸಿಗೆಯಿರುವದರಿಂದ ಸೆಕೆ ಬಹಳ ಆಗುವದು. ಧೂಳಿಯೂ ಈಗ ಬಹಳ ಏಳುವದು. ನಿನಗೆ ಅಲ್ಲಿ ಒಳಿತೆನಿಸದು, ಕೇಡಾದೀತು; ಈಗ ಒಕ್ಕಲಿಗರು ಬೆಳಗಿನಲ್ಲಿ ಹೊಲಗಳಿಗೆ ಹೋಗಿ ಕೊಯ್ಲೀ ಹರಗಿ ಹೊಲವನ್ನು ಹಸನ ಮಾಡುವರು. ಕಳೆದ ಮಳೆಗಾಲದಲ್ಲಿ ಹುಗಿದ ಕಾಲುವೆಗಳನ್ನು ಅಗಿದು ಸರಿಮಾಡುವರು. ಕಬ್ಬು ಹಚ್ಚಿದವರು ತೋಟಕ್ಕೆ ನೀರು ಕಟ್ಟುವರು. ಕೆಲವರು ಕಟ್ಟಿಗೆಯನ್ನು ಆರಿಸಿಕೊಂಡು ಊರಿಗೆ ಒಯ್ದು ಮಾರುವರು. ಹೆಂಗಸರೂ ಮಕ್ಕಳೂ ಕುಳ್ಳು ಹಚ್ಚಿ ಒಣಗಿಸುವರು. ಕೆಲವರು ಮಳೆಗಾಲಕ್ಕೆಂದು ಇವುಗಳನ್ನು ಕೂಡಹಾಕುವರು; ಕೆಲವರು ಮಾರಿಬಿಡುವರು. ಕೆಲವರು ಚಕ್ಕಡಿಚಕ್ಕಡಿಯಾಗಿ ಮಾವು, ಹಲಸು, ಕಲ್ಲಂಗಡಿ ಮುಂತಾದ ಹಣ್ಣುಗಳನ್ನು ತರುವರು. ಕೆಲವರು ತಮ್ಮ ಹೊಲಗಳಿಗೆ ಗೊಬ್ಬರವನ್ನು ಹಾಕುವರು.

ಮ—ಮಳೆಗಾಲದಲ್ಲಿ ನಿಮಗೆ ಬಹಳ ಕೆಲಸವಿರಬಹುದಲ್ಲವೇ?

ಒ—ತಂಗೀ, ನೀನನ್ನುವದು ಸರಿ. ಒಂದೆರಡು ಮಳೆಗಳಾದವೆಂದರೆ ಒಕ್ಕಲಿಗರು ಹೊಲಗಳನ್ನು ಹರಗಿ ಮುಂಗಾರಿಯನ್ನು ಬಿತ್ತುವರು. ಸಸಿಗಳು ಚೋಟು, ಗೇಣು ಆದ ಕೂಡಲೆ ಎಡೆಹೊಡೆಯುವರು. ಒಮ್ಮೊಮ್ಮೆ ಒಂದೇ ಸವನೆ ಕೆಲವು ದಿವಸ ಮಳೆ ಹತ್ತುವದು. ಆಗ ನಮ್ಮ ಹೋರೆಯು ನಡೆಯುವದಿಲ್ಲ. ದನಕರುಗಳು ಮೇಯಲಿಕ್ಕೆ ಹೋಗಲಾರವು. ಪಕ್ಷಿಗಳು ಸಹ ತಮ್ಮ ಗೂಡುಗಳಲ್ಲಿಯೇ ಕೂತಿರಬೇಕಾಗುವದು. ದೀಪಾವಳಿಯ ಹಬ್ಬವು ಹೋದ ಬಳಿಕ ಬೆಳೆಯು ಹಣ್ಣಿಗೆ ಬರುವದು. ಆಗ ಒಕ್ಕಲಿಗರ ಚಿಂತೆಯು ಹರಿಯುವದು. ಯಾಕೆಂದರೆ ಮಳೆಗಾಲದಲ್ಲಿ ಬಹಳ ಮಳೆ ಸುರಿದರೆ ಸಸಿಗಳೆಲ್ಲ ಕೊಳೆತುಹೋಗುತ್ತವೆ. ಕಾಲಕಾಲಕ್ಕೆ ಮಳೆಯಾಗಿ ಮಿಡಚಿ ಇಲ್ಲವೆ ಇಲಿಗಳ ಉಪದ್ರವವು ಆಗದಿದ್ದರೆ ಮಾತ್ರ, ಒಕ್ಕಲಿಗರು ತಮ್ಮ ಶ್ರಮದ ಫಲವನ್ನು ಉಣ್ಣುವರು. ಮುಂಗಾರಿಯನ್ನು ಒಕ್ಕುವಾಗ ಒಕ್ಕಲಿಗರಿಗೆ ದುಡಿತ ಬಹಳ ಬೀಳುವದು. ಯಾಕೆಂದರೆ ಅದೇ ಕಾಲಕ್ಕೆ ಹಿಂಗಾರಿಯನ್ನು ಬಿತ್ತುವ ತತಿಯು ಬರುತ್ತದೆ.

ಮ—ಮಳೆಗಾಲವು ಮುಗಿದ ಬಳಿಕ ನಿಮಗೆ ಏನಾದರೂ ಕೆಲಸವಿರುತ್ತದೇನು?

ಒ—ಚಳಿಗಾಲದಲ್ಲಿ ಮಳೆಯ ಅಂಜಿಕೆ ಇರುವದಿಲ್ಲ. ಆದದರಿಂದ ಆಗ ಒಕ್ಕಲಿಗರು ಅಲ್ಲಲ್ಲಿ ಕಣಗಳನ್ನು ಮಾಡಿ ತೆನೆ ಮುರಿಸಿ ಹಂತೀಕಟ್ಟಿ ತುಳಿಸುವರು. ಹಿಂಗಾರೀ ಮುಂಗಾರೀ ಬೆಳೆಗಳ ಸುಗ್ಗಿಯಲ್ಲಿಯೇ ಚಳಿಗಾಲವೆಲ್ಲ ಹೋಗುವದು. ಈ ಕಾಲದಲ್ಲಿ ಹೋರೆ ಬಹಳ, ಒಮ್ಮೊಮ್ಮೆ ಒಕ್ಕಲಿಗರು ರಾತ್ರಿಯಲ್ಲಿ ಸಹ ದುಡಿಯಬೇಕಾಗುವದು. ಚಳಿಗಾಲದಲ್ಲಿ ಬಹಳ ಚಳಿ ಬೀಳುವದರಿಂದ ತುಟಿಯೂ, ಗಲ್ಲವೂ, ಕೈಕಾಲುಗಳೂ, ಚರ್ಮವೂ ಒಡೆಯುತ್ತವೆ. ಚಳಿಗಾಲದ ಕೊನೆಯಲ್ಲಿ ತಮಗೆ ಬೇಕಾಗುವಷ್ಟು ಹುಲ್ಲು, ಮೇವು, ಕಾಳು ಇವುಗಳನ್ನು ಇಟ್ಟುಕೊಂಡು, ಮಿಕ್ಕ

ದ್ದನ್ನು ಮಾರಿ ಬಂದ ಹಣದೊಳಗಿಂದ ಅವರು ಸರಕಾರಕ್ಕೆ ಕೊಡಬೇಕಾಗುವ ತೆರಿಗೆಯನ್ನು ಕೊಟ್ಟುಬಿಡುವರು. ಕೆಲವರು ನಿಬ್ಬಣ ಜಾತ್ರೆಗಳ ಸಿದ್ಧತೆಯನ್ನು ಮಾಡುವರು.

### ಕವಿತೆ.

## ಮೂರು ಋತುಗಳು.

ರಾಗ—ಮಾಂಡ; ತಾಳ ದಾದರಾ.

ಧಾಟಿ—"ಹೊಲದ ಕಷ್ಟವನ್ನು ಕುರಿತು." ಇದರಂತೆ.

ವರುಷದಲ್ಲಿ ಮೂರು ಋತುಗಳಾಗಿ ತೋರ್ಪುವು ।
ಹರುಷವನ್ನು ಜನಕೆ ಕೊಡುತ ಮೆರೆಯುತಿರುವವು ॥ ಪಲ್ಲ ॥

**ಚಳಿಗಾಲದಿ** ತಂಪು ಗಾಳಿ ಬೀಸುತಿರುವದು ।
ಎಲೆಗಳುದುರಿ ಬನದ ಶೋಭೆ ಕುಂದುತಿರುವದು ॥ ೧ ॥

ಬಡವರ ಕೈ-ಕಾಲ್-ಗಲ್ಲಗಳೊಡೆಯುತಿರುವವು ।
ಕಡು ಕಷ್ಟದೊಳವರ ಬಾಳ್ವೆ ಸಾಗುತಿರ್ಪುದು ॥ ೨ ॥

ಸಣ್ಣ ಹಗಲು, ದೊಡ್ಡ ರಾತ್ರಿಯಾಗಿ ತೋರ್ಪುವು ।
ಬಣ್ಣಿಸಲೇಂ? ಬಿಸಿಲು ತಣ್ಣಗಾಗಿ ಹೊಳೆವುದು ॥ ೩ ॥

ಎಣ್ಣೆ ಪೂಸಿ ಮೈಗೆ ಜನರು ಮೀಯುತಿರುವರು ।
ನುಣ್ಣನ ತಾಂಬೂಲ ಸವಿದು ನಲಿಯುತಿರುವರು ॥ ೪ ॥

ಬೆಚ್ಚಗಾದ ವಸ್ತ್ರಗಳನು ಧರಿಸಿಕೊಳ್ವರು ।
ಹೆಚ್ಚೆನಿಪಾರೋಗ್ಯ ಶಕ್ತಿಗಳನು ತಾಳ್ವರು ॥ ೫ ॥

ಚಳಿಯಿಂದಲೆ, ಬಲು ಕಸುವಿಂ ಗೋದಿಕುಸಿಬೆಗಳ್ ।
ಸಲೆ ಬೆಳೆವವು ಕಬ್ಬು ಹತ್ತಿ ಬೇಳೆಕಾಳುಗಳ್ ॥ ೬ ॥

**ಬೇಸಿಗೆಯೊಳು** ಬಿಸಿಲ ತಾಪ ಹೆಚ್ಚುತಿರುವದು ।
ಸೂಸುವ ಹೊಳೆ-ಕೆರೆ-ಬಾವಿಗಳೊಣಗುತಿರುವವು ॥ ೭ ॥

ಗಿಡಗಳು ಚಿಗುರೆಲೆಗಳ ತಳೆದೆಸೆಯುತಿರುವವು ।
ಕಡು ಚಂದದ ಹೂಗಳಿಂದೆ ಮೆರೆಯುತಿರುವವು ॥ ೮ ॥

ಪೂದೋಟಗಳಲ್ಲಿ ಜನರು ಮೋದಗೊಳ್ವರು ।
ಆದರದಿಂ ಕಾರಂಜಿಯ ನೋಡಿ ನಲಿವರು ॥ ೯ ॥

ತಿಳಿ ನೀರಿನ ಕೊಳಗಳನ್ನು ಸೇರುತಿರುವರು ।
ಸಲೆ ಗಂಧದ ಬೀಸಣಿಕೆಯ ಬೀಸಿಕೊಳ್ವರು ॥ ೧೦ ॥

ಕೋಗಿಲೆ ತಾನಿಂಪಾಗಿಹ ಸ್ವರವ ಮಾಳ್ಪುದು ।
ರಾಗದಿ ಗುಂಗೀಹುಳವದು ಪಾಡುತಿರುವದು ॥ ೧೧ ॥

**ಮಳೆಗಾಲದಿ** ಭೂಮಿ ಬಹಳ ಚಂದ ಕಾಂಬುದು ।
ಜಲವು ನೋಡಿದೆಡೆಯೊಳೆಲ್ಲ ಹರಿಯುತಿರುವದು ॥ ೧೨ ॥

ಅಕ್ಕರದಿಂ ಜನರು ಗಾನ ಮಾಡುತಿರುವರು ।
ಒಕ್ಕಲಿಗರು ಹೊಲದ ಬೀಜ ಬಿತ್ತುತಿರುವರು ॥ ೧೩ ॥

ಕೊಡೆಗಳನ್ನು ಧರಿಸಿ ಜನರು ತಿರುಗುತಿರುವರು ।
ಸಡಗರದಿಂ ಜೋಕಾಲಿಯ ಕಟ್ಟುತಿರುವರು ॥ ೧೪ ॥

ಗೆಳತಿಯರಿಂ ಜೋಕಾಲಿಯನಾಡಿ ಕಾಲವ ।
ಕಳೆವರು ಬಾಲಿಕೆಯರಿಂತು ಹೊಂದಿ ಮೋದವ ॥ ೧೫ ॥

ಗಿಡಬಳ್ಳಿಗಳುರೆ ಕಸುವಿಂ ತಾಳಿ ಪೂಗಳಂ ।
ಕಡು ಚೆಲ್ವಿಂ ನಲ್ಮೆಗೊಳಿಸುತಿಹವು ನೋಳ್ಪರಂ ॥ ೧೬ ॥

---

## ೩೫ನೆಯ ಪಾಠ.

## ಮುಂಬಯಿ.

ತಂಗೀ, ಕಮಲಾ, ಮೊನ್ನೆ ನೀವು ನಿಮ್ಮ ಶಿಕ್ಷಕೆಯೊಡನೆ ಮುಂಬಯಿಗೆ ಹೋಗಿದ್ದಿರಲ್ಲ! ಆ ಊರು ಹ್ಯಾಗದೆ? ನೀವೇನೇನು

ನೋಡಿದಿರಿ? ಹೇಳಿರಿ ನೋಡೋಣ, ಎಂದು ಇಂದಿರಕ್ಕನು ಕೇಳಿ ದಳು. ಅದಕ್ಕೆ ಕಮಲೆಯು—ಮುಂಬಯಿ ನಗರವು ಹನ್ನೊಂದು ಮೈಲು ಉದ್ದ, ಮೂರು ಮೈಲು ಅಗಲವದೆಯಂತೆ; ಅಷ್ಟೆಲ್ಲಾ ತಿರುಗಾಡಿ ನೋಡಲಿಕ್ಕೆ ಎರಡುಮೂರು ತಿಂಗಳು ಹತ್ತೀತು. ನಾವು ಮುಖ್ಯ ವಾಗಿ ಗವ್ಹರ್ನರ ದೊರೆಗಳ ಕಚೇರಿ, ಹಾಯಕೋರ್ಟು, ರಾಜಾಬಾಯಿ ಟಾವರ, ರಾಣಿಯವರ ತೋಟ, ಬಾಬುಲನಾಥನ ದೇವಾಲಯ, ಕ್ರಾಫರ್ಡ ಮಾರ್ಕೇಟು, ಸಮುದ್ರ ಇಷ್ಟೇ ನೋಡಿದೆವು.

ಅಕ್ಕಾ, ಆಹಾ! ಆ ಪಟ್ಟಣದ ಸೊಬಗನ್ನೇನು ಹೇಳಲಿ! ಮೊದಲು ಮೂರು ನಾಲ್ಕು ಅಂತಸ್ತಿನ ಭವ್ಯವಾದ ಬೋರೀಬಂದರ ಸ್ಟೇಶನನ್ನೇ ನೋಡಿದರೆ ಆನಂದವಾಗುತ್ತದೆ. ಅಲ್ಲಿಂದ ಹೊರಟೆವೆಂದರೆ ಊರೊಳಗಿನ ಅಗಲಾದ ದೊಡ್ಡ ದೊಡ್ಡ ಬೀದಿಗಳು ಬೈತಲ ತೆಗೆದಂತೆ ತೋರುವವು. ಆ ದಾರಿಗಳಲ್ಲಿ ಕುದುರೇಗಾಡಿ, ಮೋಟಾರಗಾಡಿ, ಟ್ರಾಮುಗಾಡಿಗಳು ಮಿತಿಯಿಲ್ಲದೆ ಓಡಾಡುತ್ತಿರುತ್ತವೆ. ಕಾಯಿಪಲ್ಲೆ, ಎಲೆ, ಟೊಪ್ಪಿಗೆ, ವರ್ತಮಾನಪತ್ರಗಳನ್ನು ಮಾರುವವರು ಬಗೆಬಗೆಯ ಸ್ವರದಿಂದ ಒದರುತ್ತ ತಿರುಗುತ್ತಿರುವರು. ಕೆಲಸಕ್ಕೋಸುಗ ಅಡ್ಡಾ ಡುವ ಜನರಿಗಂತೂ ತೆರಪೇ ಇಲ್ಲ. ಮಾರ್ಗದ ಎರಡೂ ಬದಿಗಳಲ್ಲಿ ಐದೈದು ಆರಾರು ಅಂತಸ್ತಿನ ಮನೆಗಳನ್ನೆಷ್ಟೆಂದು ವರ್ಣಿಸಲಿ! ಅವುಗಳ ಬಾಗಿಲು, ಕಿಡಿಕಿ, ಕಮಾನು, ಗೋಡೆ ಮುಂತಾದವುಗಳನ್ನು ನೋಡುತ್ತ ಅಲ್ಲೇ ನಿಂತುಕೊಳ್ಳಬೇಕೆಂದು ಎನಿಸುತ್ತದೆ.

ಮಾರ್ಕೇಟಿನ ಅಂಗಡಿಗಳನ್ನಂತೂ ಪಾಪಿಯ ಕಣ್ಣಿನಿಂದ ನೋಡ ಲಾಗದು. ಅರಿವೆಯ ಅಂಗಡಿಯಲ್ಲಿ ನೂಲು, ಉಣ್ಣೆ, ರೇಶಿಮೆ ಇವುಗ ಳಿಂದ ಮಾಡಿದ ಅರಿವೆಗಳ ಚಂದವನ್ನೆಷ್ಟು ಹೇಳಲಿ! ಜರದ ಟೊಪ್ಪಿಗೆ- ಅಂಗಿಗಳಿಗಂತೂ ನೆಲೆಯೇ ಇಲ್ಲ. ವಿಲಾಯತೀ ಸಾಮಾನುಗಳ ಅಂಗಡಿ ಯಲ್ಲಿ ಕನ್ನಡಿ, ಚಿಮಣಿ, ಗುಳಾಪು, ಬೂಟು ಮುಂತಾದವುಗಳ ಲೆಕ್ಕ

ಗಳನ್ನು ಮಾಡುವರಾರು? ಚಿನಿವಾಲರ ಅಂಗಡಿಯಲ್ಲಂತೂ ಲಕ್ಷಾಂತರ ರೂಪಾಯಿ ಬೆಲೆ ಬಾಳುವ ವಸ್ತುಗಳನ್ನು ನೋಡಿದರೆ ಕಣ್ಣೇ ಕುಕ್ಕುವವು. ಹಣ್ಣಿನವರ ಅಂಗಡಿಯಲ್ಲಿಯ ತರತರದ ಹಣ್ಣುಗಳನ್ನು ಕಂಡು ಜೀವ ಹರಿಯುತ್ತದೆ. ಇವುಗಳಲ್ಲಿ ಯಾವದನ್ನು ನೋಡಲಿ, ಯಾವದನ್ನು ಕೊಳ್ಳಲಿ, ಯಾವದನ್ನು ಬಿಡಲಿ, ಎನಿಸಿ ಹುಚ್ಚರಂತೆ ಆದೆವು. ಒಂದು ಚಕ್ಕಡಿ ರೂಪಾಯಿಗಳನ್ನು ತಂದರೆ ಒಂದೊಂದು ಒಡವೆಯನ್ನು ಕೊಂಡುಕೊಳ್ಳಲಿಕ್ಕೆ ಸಾಲದೆಂದು ತೋರುವದು. ಚಹಾ-ಕಾಫಿ-ಫಲಾಹಾರಗಳ ಅಂಗಡಿಗಳಂತೂ ನೂರಾರು ಹೆಜ್ಜೆಗೊಂದು ಇರುತ್ತವೆ.



ಇದು ಬಂದರವಾಗಿರುವದರಿಂದ ಇಲ್ಲಿ ವ್ಯವಹಾರವು ಬಹಳ ಸಾಗುತ್ತದೆ. ಆದರಿಂದ ಬೇರೆ ಬೇರೆ ಎಲ್ಲೆಲ್ಲಿಯ ದೇಶದ ಜನರು ಇಲ್ಲಿಗೆ ಬಂದಿರುವರು. ತರತರದ ಉಡುತೊಡಿಗೆಯ ಈ ಜನರ ಗುಂಪನ್ನು ನೋಡುವದೊಂದು ಕೌತುಕವೇ. ಕೆಲವರು ಬಗೆಬಗೆಯ ಟೊಪ್ಪಿಗೆಗಳನ್ನೂ ಮುಂಡಾಸವನ್ನೂ ಹಾಕಿಕೊಂಡಿರುವರು. ಹಲವರು

ರುಮಾಲ, ಪಟಕಾ ಇವುಗಳನ್ನು ಸುತ್ತಿರುವರು. ಕೆಲವರು ಚಣ್ಣವನ್ನೂ ಕೆಲವರು ಧೋತರವನ್ನೂ ಉಟ್ಟುಕೊಂಡಿರುವರು. ಹೆಂಗಸರ ಉಡಿಗೆ ಗಳಾದರೂ ನಾನಾ ಪ್ರಕಾರದವಿರುವವು.

ಬಾಬುಲನಾಥನ ಗುಡಿಯು ಗುಡ್ಡದಮೇಲಿರುವದು. ನೂರಾರು ಪಾವಟಗೆಗಳನ್ನು ಏರಬೇಕಾಗುವದು. ಬಿಳೀ ಸಂಗಮರವರೀ ಕಲ್ಲಿನ ಮೂರ್ತಿಯೂ ಬಣ್ಣದಿಂದ ತರತರದ ಚಿತ್ರಗಳನ್ನು ತೆಗೆದ ಸಭಾಮಂಟ ಪವೂ ಬಲು ಚೆಂದ ಕಾಣುವವು. ಇಲ್ಲಿಂದ ನೋಡಿದರೆ ಮುಂಬಯಿ ಯೊಳಗಿನ ಬಹುತರ ಯಾವತ್ತೂ ಗಿರಣಿಗಳು ಕಾಣುವವು. ಅವುಗಳಲ್ಲಿ ಬಂಬಿನಿಂದ ಹೊರಡುವ ಹೊಗೆಯು ಮುಗಿಲ ತುಂಬಿ ಹೋಗುತ್ತಿರುವದು.

ಸಮುದ್ರದ ವಿಸ್ತಾರವನ್ನೇನು ಹೇಳಬೇಕು! ಅದರೊಳಗೆ ಲೆಕ್ಕವಿಲ್ಲ ದಷ್ಟು ಹಡಗಗಳು ಸಂಚರಿಸುತ್ತಿದ್ದವು. ಕೆಲವೊಂದರಲ್ಲಿ ಸಾಮಾನು ಹೇರುತ್ತಿದ್ದರು. ಕೆಲವೊಂದರೊಳಗಿನ ಸಾಮಾನುಗಳನ್ನು ಇಳಿಸುತ್ತಿ ದ್ದರು. ದಂಡೆಯ ಮೇಲಿನ ವಖಾರದೊಳಗಿನ ಸರಕಿನ ಚೀಲಗಳಿಗಂತೂ ಅಳತೆಯೇ ಇಲ್ಲ.

ಈ ಮೇರೆಗೆ ನೋಡುತ್ತ ಬಂದು ಗವ್ಹರ್ನರ ದೊರೆಗಳ ಕಚೇರಿ-ಹಾಯಕೋರ್ಟುಗಳನ್ನು ನೋಡಿ ಬೆರಗಾದೆವು. ಇವುಗಳನ್ನೆಲ್ಲಾ ಕಣ್ಮುಟ್ಟ ನೋಡಿದರೆ ಮಾತ್ರ ಇವುಗಳ ಸೌಂದರ್ಯವು ಗೊತ್ತಾಗು ವದು. ಬರೆ ಬಾಯಿಂದ ಹೇಳಿದ್ದನ್ನು ಕೇಳಿದರೆ ತಿಳಿಯದು. ಆ ದಿವಸ ನಾವು ತಿರುಗಿ ತಿರುಗಿ ನೋಡಿ ನೋಡಿ ದಣಿದದ್ದರಿಂದ ಉಂಡ ಕೂಡಲೆ ಮಲಗಿದೆವು. ಆದರೆ ರಾತ್ರಿಯಲ್ಲೆಲ್ಲ ಕನಸಿನೊಳಗೆ ಗಾಡಿಯ ಸಪ್ಪಳ, ಇಮಾರತುಗಳ ಶಿಖರ, ಮಾರ್ಕೇಟಿನೊಳಗಿನ ಸರಕು ಇವೇ ಬರು ತ್ತಿದ್ದವು.

## ೩೭ನೆಯ ಪಾಠ.

# ಮುಂಬಯಿಯಿಂದ ಪುಣೆ.

ನಾವು ಮುಂಬಯಿಯಲ್ಲಿ ನಾಲ್ಕು ದಿವಸ ನಿಂತು ಅದನ್ನು ನೋಡಿದ ಬಳಿಕ ಅಕ್ಕನವರು ಇಂದು ಊರಿಗೆ ಹೊರಡುವದೆಂದು ಹೇಳಿದರು. ಕೂಡಲೆ ನಾವು ಊಟ-ಉಡಿಗೆಗಳನ್ನು ತೀರಿಸಿಕೊಂಡು ನಮ್ಮ ನಮ್ಮ ಸಾಮಾನುಗಳನ್ನು ಕಟ್ಟಿಕೊಂಡು ಕೂತೆವು. ಅಷ್ಟರಲ್ಲಿ ಕುದುರೆಯ ಗಾಡಿಗಳು ಸಿದ್ಧವಾಗಿ ಬಂದವು. ನಾವು ಗಾಡಿಯೊಳಗೆ ಕುಳಿತುಕೊಂಡು ಸ್ಟೇಶನಕ್ಕೆ ಬಂದೆವು. ಅಲ್ಲಿ ಜನರ ಗದ್ದಲವೆಷ್ಟು! ಒಬ್ಬರ ಮಾತು ಒಬ್ಬರಿಗೆ ಕೇಳುತ್ತಿದ್ದಿಲ್ಲ. ಒಂದು ಗಾಡಿ ಒದರುತ್ತ ಬರುತ್ತಿತ್ತು; ಮತ್ತೊಂದು ಹೋಗುತ್ತಿತ್ತು; ಇನ್ನೊಂದು ಸಾಮಾನದ ಗಾಡಿಗಳನ್ನು ಸಾಲುಗೊಳಿಸುತ್ತಿತ್ತು; ಕೆಲವರು ಕೈಗಾಡಿಗಳಲ್ಲಿ ಸಾಮಾನು ಹೇರಿಕೊಂಡು ಡಬ್ಬಿಯಲ್ಲಿ ಹಾಕುತ್ತಿದ್ದರು; ಕೆಲವರು ಟಿಕೇಟು ತಕ್ಕೊಂಡು ತಾವು ಹೋಗುವ ಗಾಡಿಗಳನ್ನೇರುತ್ತಿದ್ದರು. ಇಷ್ಟರೊಳಗೆ ನಮಗೂ ಟಿಕೇಟುಗಳು ಸಿಕ್ಕವು. ಒಂದು ಗಾಡಿಯಲ್ಲಿ ಕುಳಿತೆವು. ನಮ್ಮ ಹೊರತು ಅದರಲ್ಲಾರೂ ಇದ್ದಿಲ್ಲ. ಕೂಡಲೆ ಗಾರ್ಡನು ಹಸುರು ನಿಶಾನಿಯನ್ನು ಬೀಸಿದನು. ಗಾಡಿಯು ಒದರುತ್ತ ಸಾಗತೊಡಗಿತು. ಆಗ ಅಕ್ಕನವರು—“ತಂಗಿಯರಿರಾ, ಕಿಡಿಕಿಗಳನ್ನು ತೆರೆಯಿರಿ. ಅದರೊಳಗಿಂದ ಎಡಬಲದ ಸೃಷ್ಟಿಯ ಸೊಬಗನ್ನು ನೋಡಿರಿ,” ಎಂದು ಹೇಳಿದರು. ನಾವು ಉತ್ಸುಕತೆಯಿಂದ ಕಿಡಕಿಗಳಲ್ಲಿ ನೋಡಲಾರಂಭಿಸಿದೆವು. ಅಹಾ ! ಏನು ಆ ಸೊಬಗು ! ಎಡಬಲದ ಉತ್ತತ್ತಿ, ತೆಂಗಿನ ಗಿಡಗಳನ್ನೂ ಚೆಂದವಾದ ಮನೆಗಳನ್ನೂ ನೋಡುತ್ತ ಆನಂದಬಡುತ್ತಿರುವಷ್ಟರಲ್ಲಿ ಉಗಿಬಂಡಿಯು ಸಾಷ್ಟಿಯ ನಡುಗಡ್ಡೆಗೆ ಬಂತು. ಸಮುದ್ರದ ಬದಿಯಿಂದ ಹಾಯುತ್ತಿರುವಾಗ ಗಿಡ್ಡ ಗಿಡ್ಡ ಮನೆಗಳೂ ಕಿರಿಗಂಟಿಯ ಅಡವಿಯೂ ಅವುಗಳಲ್ಲಿ ಮೇಯುತ್ತಿರುವ ಕುರಿ-ಆಡು ದನಕರುಗಳ ಹಿಂಡುಗಳೂ

ಕಾಣುತ್ತಿದ್ದವು. ಮುಂದೆ ಒಂದು ಸಮುದ್ರದ ಒತ್ತಿನಗುಂಟ ನಡೆದೆವು. ಅಲ್ಲಿ ಎರಡೂ ಮಗ್ಗಲಲ್ಲಿ ತಾಳೆ, ಮಾವು, ಅಂಜೂರಿಯ ಬನಗಳು ಕಂಡವು. ಹಕ್ಕಿಗಳು ಹಿಂಡುಗಟ್ಟಿಕೊಂಡು ಹಾರಾಡುತ್ತಿದ್ದವು. ಬತ್ತದ ಹಾಳಿಗಳು ಬೆಳೆಯಿಂದ ಒಪ್ಪುತ್ತಿದ್ದವು. ಇವುಗಳನ್ನು ನೋಡುತ್ತ ಠಾಣೇ ಪಟ್ಟಣಕ್ಕೆ ಬಂದೆವು. ಆಗ ಅಕ್ಕನವರು ಆಕಾಶದಲ್ಲಿ ಮೋಡದ ಪಡೆಯಂತೆ ಕಾಣುವವೇ ಸಹ್ಯಾದ್ರಿಯ ಶಿಖರಗಳೆಂದು ತೋರಿಸಿದರು. ಮುಂದೆ ಕಲ್ಯಾಣದಿಂದ ಕರ್ಜತದ ಸಮೀಪಕ್ಕೆ ಬಂದಂತೆ ಈ ಶಿಖರ ಗಳೂ ಪರ್ವತದ ಕಡಿವಾಡಿಗಳೂ ನಿಚ್ಚಳವಾಗಿ ಕಾಣತೊಡಗಿದವು.

ಕರ್ಜತದಲ್ಲಿ ಗಾಡಿಗೆ ಮತ್ತೊಂದು ಎಂಜಿನವನ್ನು ಹಚ್ಚಿದರು. ಯಾಕೆಂದರೆ ಇಲ್ಲಿಂದಲೇ ಸಹ್ಯಾದ್ರಿಯನ್ನು ಹತ್ತಿ ದಾಟಬೇಕಾಗುವದು. ಇದೇ ಹಾದಿಯು ಆ ಪರ್ವತದೊಳಗಿನ ಕಡಿಮೆ ಎತ್ತರದ ನೆಲವು. ಇದು ಹದಿನಾರು ಮೈಲು ಇರುವದು. ಕರ್ಜತವನ್ನು ದಾಟಿದೆವೆಂದರೆ ಬಿಸಿಗಾಳಿಯು ಕೊಂಕಣವನ್ನು ದಾಟಿ ದೇಶವನ್ನು ಸೇರುವೆವೆಂದು ಅಕ್ಕ ನವರು ಹೇಳಿದರು. ಇತ್ತ ಉಗಿಬಂಡಿಯು, ಅಬ್ಬರಿಸುತ್ತ ನಾಗಮುರಿಗೆ ಯಂಥ ಹಾದಿಯಲ್ಲಿ ಓಡುತ್ತೋಡುತ್ತ ಒಮ್ಮಿಂದೊಮ್ಮೆ ಒಂದು ಗವಿ ಯಲ್ಲಿ ಹೊಕ್ಕಿತು. ನಾವೆಲ್ಲರೂ ಅಂಜಿ ಗಾಬರಿಯಾದೆವು. ಆ ಗವಿ ಯಲ್ಲಿ ದೀಪದ ಬೆಳಕಲ್ಲದೆ ಮತ್ತೊಂದಿಲ್ಲ, ಮಂದಿಯ ಸುಳವಿಲ್ಲ, ಗಿಡಗಂಟಿ ಗಳಿಲ್ಲ; ಸ್ವಚ್ಛವಾದ ಗಾಳಿಯೂ ಇಲ್ಲ. ಹೀಗೆ ಒಂದೆರಡು ಮಿನಿಟು ಗಳ ವರೆಗೆ ಅಂಜಿಕೊಂಡು ಸುಮ್ಮನೆ ಕುಳಿತಿರಲು ಬಂಡಿಯು ಒಮ್ಮಿಂ ದೊಮ್ಮೆ ಬೆಳಕಿಗೆ ಬಂತು. ಆಗ ನಾವು ಉಲ್ಲಾಸದಿಂದ ಎಡಬಲದ ಸೃಷ್ಟಿಯನ್ನು ನೋಡಹತ್ತಿದೆವು. ಅಷ್ಟರಲ್ಲಿ ಮತ್ತೊಂದು ಗವಿಯಲ್ಲಿ ಸೇರಿತು. ಹೀಗೆ ಹತ್ತಿಪ್ಪತ್ತು ಗವಿಗಳಲ್ಲಿ ಸೇರುತ್ತ ಮತ್ತೆ ಹೊರಗೆ ಬರುತ್ತ ಇತ್ತು. ಕೆಲವು ಕಡೆಯಲ್ಲಂತೂ ಬಂಡಿಯು ಗುಡ್ಡದ ಕಡಿವಾಡಿ ಗುಂಟ ನಡೆದಿತ್ತು. ಆ ಹಾದಿಯ ಮತ್ತೊಂದು ಬದಿಯಲ್ಲಿ ನಾಲ್ಕು

ಮೊಳದ ಅಂತರದಲ್ಲಿ ಸಾವಿರಾರು ಫೂಟು ತಗ್ಗಾದ ಕೊಳ್ಳವನ್ನು ನೋಡಿದೆವು. ಚಕ್ಕಡಿ ಬಿದ್ದಂತೆ ಉಗಿಬಂಡಿಯು ಈ ಕೊಳ್ಳದಲ್ಲಿ ಬಿದ್ದೀತಲ್ಲ ಎಂದು ಹೆದರಿದೆವು. ಆ ಕೊಳ್ಳದೊಳಗೆ ಬೆಳೆದ ತೆಂಗು, ಮತ್ತಿಯ ಮರಗಳಿಂದ ಹಸುರು ಅರಿವೆಯನ್ನು ಹಾಸಿದಂತೆ ಕಾಣುವದು. ಇಂಥ ಭಯಂಕರ ಸ್ಥಳದಲ್ಲಿಯೂ ಮನುಷ್ಯರು ಕಟ್ಟಿಕೊಂಡ ಮನೆಗಳೂ ಬಿತ್ತಿದ ಗದ್ದೆಗಳೂ ಇರುವವು.

ಅಂಥ ಭಯಂಕರವಾದರೂ ನೋಡಲಿಕ್ಕೆ ಸೊಗಸಾದ ಪ್ರದೇಶದಿಂದ ಬಂಡಿಯು ಬರಬರನೆ ನಡೆಯುತ್ತ ಮಹಾರಾಷ್ಟ್ರವನ್ನು ಸೇರಿತು. ಹಾದಿಯಲ್ಲಿ ಬಂಜೆ ನೆಲ, ಬಿಡಿ ಬಂಡೆಗಳ ನೆಲ, ಮೊರಡಿ ಭೂಮಿ, ಪೈರುಳ್ಳ ಹೊಲ ಮುಂತಾದವುಗಳನ್ನು ನೋಡುತ್ತ ಮಹಾರಾಷ್ಟ್ರರಾಜಧಾನಿಯಾಗಿದ್ದ ಪುಣೆ ಪಟ್ಟಣಕ್ಕೆ ಬಂದು ಮುಟ್ಟಿದೆವು.

---

## ೩೭ನೆಯ ಪಾಠ.

## ಪುಣೆಯಿಂದ ಧಾರವಾಡ.

ನಿನ್ನೆ ಪುಣೆಗೆ ಬಂದ ಸಂಗತಿಯನ್ನು ಹೇಳಿದ್ದೇನೆಯಷ್ಟೇ. ಆ ಊರಲ್ಲಿ ಒಂದೇ ದಿನಸ ಇದ್ದೆವು. ಮುಂಬಯಿಯನ್ನು ನೋಡಿದ ಮೇಲೆ ಊರು ನೋಡಬೇಕೆಂಬ ಆಶೆಯು ಉಳಿಯುವದಿಲ್ಲ. ಆದರೂ ಈ ಪಟ್ಟಣವು ಪ್ರಾಚೀನ ರಾಜಧಾನಿಯಾದದ್ದರಿಂದ ಹಲಕೆಲವು ನೋಡತಕ್ಕಂಥ ಸ್ಥಳಗಳಿರುವವು. ಆದರೆ ನಾವು ಪರ್ವತಿಯ ದೇವಸ್ಥಾನವನ್ನೊಂದನ್ನೇ ನೋಡಿದೆವು.

ಈ ದೇವಸ್ಥಾನವು ಪುಣೆಯಿಂದ ಒಂದೆರಡು ಮೈಲು ದೂರ ಒಂದು ಗುಡ್ಡದ ಮೇಲಿರುವದು. ನೂರಿನ್ನೂರು ಮೆಟ್ಟಲುಗಳನ್ನು ಏರಬೇಕಾಗುವದು. ಗುಡಿಯಲ್ಲಿ ಬೆಳ್ಳಿಯ ಈಶ್ವರನ ಮೂರ್ತಿಯು ಎದ್ದು ಕಾಣುವದು. ಆ ಮೂರ್ತಿಯ ಎಡಬಲದ ತೊಡೆಗಳ ಮೇಲೆ ಪಾರ್ವತಿಯ

ಹಾಗೂ ಗಣಪತಿಯ ಮೂರ್ತಿಗಳು ಒಪ್ಪುತ್ತಿರುವವು. ಇವೆರಡನ್ನೂ ಬಂಗಾರದಿಂದ ಮಾಡಿರುವರು. ಈ ಮೂರ್ತಿಗಳ ತಲೆಯ ಮೇಲೆ ಹೆಡೆಗಳು ಬರುವಂತೆ ಬೆಳ್ಳಿಬಂಗಾರದ ಹಾವುಗಳನ್ನು ಮಾಡಿರುವರು. ಈ ದೇವಾಲಯವನ್ನು ನಾನಾಸಾಹೇಬ ಪೇಶ್ವೆಯವರು ಕಟ್ಟಿಸಿರುವರು. ನಿತ್ಯ ಮೂರು ಬಾರೆ ಪೂಜೆಯಾಗುವದಂತೆ.

ಮರುದಿವಸ ಈ ಊರಿಂದ ವಿಜಾಪುರದ ಮಾರ್ಗವಾಗಿ ಊರಿಗೆ ಹೊರಟೆವು. ಇನ್ನೊಂದು ಮಾರ್ಗವು ಮಿರ್ಜಿ-ಬೆಳಗಾವಿಗಳ ಮೇಲಿಂದ ಹೋಗುವದು. ಇದೇ ಹಾದಿಯಿಂದ ನಾವು ಮುಂಬಯಿಗೆ ಹೋಗಿದ್ದೆವು. ನಾವು ಬಂದ ಮಾರ್ಗವು ಸೊಲ್ಲಾಪುರದ ನೆರೆಯಲ್ಲಿರುವ ಹುಟಗೆಯವರೆಗೆ ಬರುವದು. ಅಲ್ಲಿಂದ ನಾವು ಹತ್ತಿಕೊಂಡು ಬಂದ ದೊಡ್ಡ ಗಾಡಿಯು ಮದ್ರಾಸಕ್ಕೆ ಹೋಗುವದು. ಅದರಿಂದ ಇಳಿದು ನಾವು ಹಳೆಯ ಗಾಡಿಯಲ್ಲಿ ಕೂತೆವು.

ಹುಟಗೆಯಿಂದ ಪ್ರವಾಸವು ಬಲು ಬೇಸರವೆನಿಸುವದು. ಹಾದಿಯಲ್ಲಿ ಸೃಷ್ಟಿಯ ಸೊಬಗುಗಳಿಲ್ಲ. ಬಂಜೆ ಭೂಮಿಯು ರಣಗುಟ್ಟುತ್ತಿರುವದು. ಕಣ್ಣಿಗೆ ಅರೆದು ಹಚ್ಚಿಕೊಂಡೇನಂದರೆ ಗಿಡಗಳಿಲ್ಲ. ಊರುಗಳು ಒಂದರಿಂದೊಂದು ಬಹಳ ದೂರ. ಇಷ್ಟು ಸುಖದೊಳಗೆ ಉಗಿಬಂಡಿಯು ಗುಳ್ಳೆಯಬಸಪ್ಪನಂತೆ ನಡೆಯತೊಡಗುವದು. ಕೇಳುವದೇನು? ತಲೆಚಿಟ್ಟೆನಿಸುವದು. ಆದರೂ ಭೀಮಾ ನದಿಯ ಪ್ರದೇಶವು ಗಿಡಗಳಿಂದಲೂ ಹಳ್ಳಿಗಳ ಸಾಲುಗಳಿಂದಲೂ ತಕ್ಕಷ್ಟು ಮನೋಹರವಾಗಿರುವದು. ನಾವು ಹಾಳಹಂಗಾಮದಲ್ಲಿ ಹೋಗಿದ್ದೆವಂತೂ; ಎಳ್ಳಷ್ಟೂ ಸುಖವೆನಿಸುತ್ತಿದ್ದಿಲ್ಲ. ಈಗ ಹೊಲದಲ್ಲಿ ಬೆಳೆಯಿರುವ ಕಾರಣ ಎಡಬಲದಲ್ಲಿ ಹಬ್ಬಿರುವ ಎರೆಯ ಹೊಲಗಳಲ್ಲಿ ಬೆಳೆದು ನಿಂತ ಪೈರುಗಳನ್ನು ನೋಡಿ ಮನಸ್ಸಿಗೆ ತುಸು ಆನಂದವೆನಿಸುವದು. ಊಬು ಹಾಯ್ದಂಥ, ಮೂಡಗಾಳಿಯ ಹೊಡೆತದಿಂದ ತೆರೆ ಹೊಯ್ಯುವಂಥ

ಗೋದಿಯ ಬೆಳೆಯ ಚೆಂದವನ್ನೆಷ್ಟು ಹೇಳಲಿ! ಜೋಳಕಡಲೆಗಳ ಬೆಳೆಯೂ ಮುಗಿಲಬಣ್ಣದ ಹೂವಿನಿಂದ ಮೆರೆಯುವ ಅಗಸಿಯ ಬೆಳೆಯೂ ಬಲು ಚೆಂದ ಕಾಣುವವು. ಹಸುರು ಮುರಿಯುವ ಹತ್ತಿಯ ಬೆಳೆಯನ್ನಂತೂ ನೋಡಲಾಸಲ್ಲ. ಅಲ್ಲಲ್ಲಿ ಚಿಗರಿಯ ಹಿಂಡುಗಳು ಚಕ್ಕಂದದಿಂದ ಅಡ್ಡಾಡುತ್ತಿರುವವು. ಇವೆಲ್ಲವುಗಳನ್ನು ನೋಡುತ್ತ ಆನಂದದಿಂದ ಮಾತಾಡುತ್ತ ಕುಳಿತಿದ್ದೆವು.

ಹೀಗೆ ಹುಟಗೆಯಿಂದ ಸುಮಾರು ನಾಲ್ವತ್ತು ಮೈಲು ಬರಲು ಮರಡಿಸಾಲು ಹತ್ತುವದು. ಈ ಎದ್ವಾಣಿಯಿಂದ ವಿಜಾಪುರದ ಗೋಲಗುಮಟವು ಕಾಣುವದು. ಇದರಷ್ಟು ದೊಡ್ಡ ಗುಮಟವು ಭೂಮಿಯಲ್ಲಿ ಇಲ್ಲೆಂದು ಹೇಳುವರು. ಇದು ಮಹಮ್ಮದಶಹನ ಗೋರಿಯು. ಮುಂದೆ ವಿಜಾಪುರ-ಬಾಗಲಕೋಟೆಗಳನ್ನು ದಾಟಿದ ಬಳಿಕ ಬದಾಮಿಯ ಗುಡ್ಡದ ಸಾಲು ಕಾಣುವದು. ಆ ಗುಡ್ಡದ ಉಸುಬಿನ ಕಲ್ಲುಗಳು ಮಳೆ-ಗಾಳಿಗಳ ಹೊಡೆತದಿಂದ ಸವೆದು ಗುಡ್ಡದ ಮೇಲೆ ಗುಡಿ ಇಲ್ಲವೆ ಕೊತ್ತಳಗಳನ್ನು ಕಟ್ಟಿದಂತೆ ತೋರುವವು. ಹಾಳಾದ ಕೋಟೆಯ ಭಾಗವು ತುಸು ತುಸು ಕಾಣುವದು. ಬದಾಮಿಯಿಂದ ಹೊರಟೆವೆಂದರೆ ಮರಡಿ ಸಾಲಿನಲ್ಲಿ ಬಂಡಿಯು ಬರುವದು. ಈ ಮರಡಿಗಳಲ್ಲಿ ಕಿರಿಗಂಟೆಗಳ ಹೊರತು ಮತ್ತೇನೂ ಇಲ್ಲ. ಆದರೆ ಈ ಸ್ಥಳದಿಂದ ನೋಡಲು ಮಲಪ್ರಭಾ ನದಿಯ ಎರಡೂ ದಂಡೆಯ ಮೇಲೆ ಗುಂಪಾಗಿ ತೋರುವ ಹಳ್ಳಿಗಳೂ ಗುಡ್ಡದ ಓರೆಗುಂಟ ತಗ್ಗಿನಲ್ಲಿ ಹರಿಯುವ ಹೊಳೆಯ ನೀರೂ ಬೆಳೆಯುಳ್ಳ ಹೊಲಗಳೂ ಒಮ್ಮೆಲೆ ಕಣ್ಣಿಗೆ ಬೀಳುವವು. ಆಗ ಭೂಮಿಯನ್ನು ಹಕ್ಕಿಯಂತೆ ನೋಡಿ ನಕಾಶವನ್ನು ತೆಗೆಯಬೇಕೆಂದು ಹೇಳಿದ್ದು ನೆನಪಾಯಿತು. ಆಲೂರಿಂದ ಗದಗಿನ ವರೆಗೆ, ಅದೇಕೆ, ಧಾರವಾಡದ ವರೆಗೆ, ಕಣ್ಣಿಗೆ ಕಾಣುವಷ್ಟು ನೆಲದ ತುಂಬ ಹಬ್ಬಿದ ಎರೆಹೊಲಗಳ ಹೊರತು ಹೆಚ್ಚಿನ ಚಮತ್ಕಾರಗಳೇನೂ ಇಲ್ಲ.

ಈ ಮೇರೆಗೆ ಕಮಲೆಯು ತನ್ನ ಪ್ರವಾಸದ ವರ್ಣನೆಯನ್ನು ಅಕ್ಕನ ಮುಂದೆ ಹೇಳಿದಳು. ಆಗ ಅಕ್ಕನು—ಕಮಲೇ, ದುಡ್ಡು ವೆಚ್ಚವಾದರೂ ಚಿಂತೆಯಿಲ್ಲ; ನೀವು ಎಷ್ಟೋ ಹೊಸ ಪ್ರದೇಶಗಳನ್ನು ನೋಡಿ ಬಂದಿರಿ, ಸೃಷ್ಟಿಯ ಸೊಬಗನ್ನು ಕಂಡಿರಿ. ಇಷ್ಟೇ ಅಲ್ಲ, ನೋಡಿದ್ದನ್ನೆಲ್ಲ ಸರಿಯಾಗಿ ಹೇಳುವಷ್ಟು ಜಾಣತನವನ್ನು ಕಲಿತಿರಿ. ಇದನ್ನೆಲ್ಲ ನೋಡಿ ನನಗೆ ಸಂತೋಷವಾಯಿತೆಂದು ನುಡಿದು ತಂಗಿಯನ್ನು ತಬ್ಬಿಕೊಂಡು ಮುದ್ದಿಟ್ಟಳು.

---

## ೩ನೆಯ ಭಾಗ—ಗೃಹವ್ಯವಸ್ಥೆ ಮುಂತಾದ ವಿಷಯುಗಳ ಪಾಠಗಳು.

### ೩೮ನೆಯ ಪಾಠ.

### ಶಾರದೆಯ ಉಡಿಗೆ.

ಶಾರದೆಯು ಅಳುತ್ತಾ ಲಕ್ಷ್ಮಿಯ ಬಳಿಗೆ ಬಂದು—ಅಕ್ಕಾ, ಇಗೋ ನೋಡು, ನನ್ನ ಸೀರೆಯು ಹರಿದುಹೋಗಿದೆ. ಈಗ ನಾನೇನು ಮಾಡಲಿ? ನಾನು ಪೆಟ್ಟಿಗೆಯನ್ನು ಸರಿಸಿದ್ದರೆ ಅದರಿಂದ ಹೊರಬಿದ್ದಿರುವ ಕಬ್ಬಿಣದ ಹಿಡಿಕೆಯು ನನ್ನ ಸೀರೆಯಲ್ಲಿ ಸಿಗಬೀಳುತ್ತಿದ್ದಿಲ್ಲ.

ಪಾರ್ವತಿ—ಆ ಪೆಟ್ಟಿಗೆಯನ್ನು ಸರಿಸುವ ಅವಶ್ಯವಿರಲಿಲ್ಲ. ಹೋಗಲಿಕ್ಕೂ ಬರಲಿಕ್ಕೂ ನಡುವೆ ಬೇಕಾದಷ್ಟು ಸ್ಥಳವಿತ್ತು; ಶಾರದೆಯು ಎಚ್ಚರದಿಂದಿದ್ದರೆ ಆಕೆಯ ಸೀರೆಗೆ ಏನೇನೂ ತಾಗುತ್ತಿದ್ದಿಲ್ಲ.

ಶಾರದೆ—ಅಕ್ಕಾ, ನೀನನ್ನುವದು ಸರಿಯೇ. ನನ್ನದೇ ತಪ್ಪಾಯಿತು. ಸುತ್ತಲು ಚೆನ್ನಾಗಿ ನೋಡದೆ ನಾನು ಓಡಿದ್ದರಿಂದಲೇ ಹೀಗಾಯಿತು. ಸೀರೆಗೆ ಒಂದು ಸಣ್ಣ ತೂತು ಬಿದ್ದಿತ್ತು. ಅದರಲ್ಲಿ ಕಬ್ಬಿಣದ ಹಿಡಿಕೆಯು ಸಿಕ್ಕಿಕೊಂಡಿತು. ಆದ್ದರಿಂದ ಸೀರೆಯು ಮತ್ತಿಷ್ಟು ಹರಿಯಿತು.

ಲಕ್ಷ್ಮಿ—ಸೀರೆಗೆ ತೂತು ಬಿದ್ದ ಕೂಡಲೆ ಅದನ್ನು ಹೊಲಿದು ಬಿಟ್ಟಿದ್ದರೆ ಅದು ಹೆಚ್ಚಿಗೆ ಹರಿಯುತ್ತಿರಲಿಲ್ಲ. ಇರಲಿ, ಅದಕ್ಕೆ ತೂತು ಯಾಕೆ ಬಿತ್ತು?

ಶಾ—ಅಕ್ಕಾ, ನಾನೇನು ಹೇಳಲಿ! ಆ ತಪ್ಪು ಕೂಡ ನನ್ನದೇ. ನಾನು ಸಾಲೆಯಲ್ಲಿ ಬಾಕಿನ ಮೇಲೆ ಕುಳಿತಾಗ ಬಾಕಿನಿಂದ ಹಾದಿದ್ದ ಮೊಳೆಯನ್ನು ನೋಡಲಿಲ್ಲ. ಸೀರೆಯು ಮೊಳೆಗೆ ಸಿಕ್ಕಿದ್ದರಿಂದ ಅದಕ್ಕೆ ತೂತು ಬಿತ್ತು. ಅವ್ವನು ಅಂದೇ ಅದನ್ನು ಹೊಲಿಯಲಿಕ್ಕೆ ನನಗೆ ಹೇಳಿದಳು. ಆದರೆ ನನಗೆ ನೆಟ್ಟಗೆ ಹೊಲಿಯಲಿಕ್ಕೆ ಬಾರದ್ದರಿಂದ,

ಹಾಗೂ ಹೀಗೂ ಹೊಲಿದರೆ ಜನರು ನಗುವರೆಂದು ನಾನು ಅದನ್ನು ಹೊಲಿಯಲೇ ಇಲ್ಲ. ಹಾಡು ಕೇಳಲಿಕ್ಕೆ ನಿನ್ನ ಸಂಗಡ ನನಗೆ ಬರುವ ದಾಗುವದಿಲ್ಲೆಂಬದನ್ನು ನೋಡಿ ನನಗೆ ಬಹಳ ಕೆಡಕೆನಿಸುತ್ತದೆ. ಈ ಹರಕು ಸೀರೆಯನ್ನುಟ್ಟುಕೊಂಡು ನಾನು ಅಲ್ಲಿಗೆ ಹೋಗಲಾರೆನು. ಇದು ಹರಿದಿದೆಯೆಂದು ಅವ್ವಗೆ ತಿಳಿದರೆ ಆಕೆ ಬಹಳ ಸಿಟ್ಟು ಮಾಡುವಳು.

ಲ—ತಂಗೀ, ಆದದ್ದಾಯಿತು; ನಾವು ಬರೇ ಓಡಾಡುತ್ತಿರಲಿ, ಯಾವದಾದರೂ ಕೆಲಸವನ್ನು ಮಾಡುತ್ತಿರಲಿ, ಬಹಳ ಎಚ್ಚರದಿಂದಿರ ಬೇಕು. ನಿನ್ನನ್ನು ಬಿಟ್ಟು ಈ ಹೊತ್ತು ಹಾಡು ಕೇಳಲಿಕ್ಕೆ ನಾವು ಹೋಗುವದಿಲ್ಲ. ಬೇಕಾದರೆ ಈಗಲೇ ಹೊಲಿಯುವ ಸಾಮಾನುಗಳನ್ನು ತಂದು ಹೊಲಿಯಹತ್ತೋಣ.

ಇವರ ತಾಯಿಯು ನೆರೆಯ ಕೋಣೆಯಲ್ಲಿ ಕುಳಿತು ಇವರಿಬ್ಬರ ಸಂಭಾಷಣವನ್ನು ಕೇಳುತ್ತಿದ್ದಳು. ಆಕೆಯು ಎದ್ದು ಬಂದು—"ಶಾರದೇ, ನಿನ್ನ ತಪ್ಪು ಗೊತ್ತಾಗಿ ನಿನಗೆ ಕೆಡಕೆನಿಸಿರುವದು. ಆದ್ದರಿಂದ ನಿನಗೆ ನಾನು ಸಿಟ್ಟು ಮಾಡುವದಿಲ್ಲ. ಈಕೆಯನ್ನು ಬಿಟ್ಟು ಹಾಡು ಕೇಳಲಿಕ್ಕೆ ನೀನು ಹೋಗುವದಿಲ್ಲವೆಂದು ಹೇಳಿದ್ದನ್ನೂ ಈಕೆಯ ಸಂಗಡ ಹೊಲಿ ಯುತ್ತ ಕೂಡ್ರುವಿಯೆಂಬದನ್ನೂ ಕೇಳಿ ನನಗೆ ಬಹಳ ಸಂತೋಷ ವಾಗಿದೆ. ಸೀರೆಯು ಹೊಲಿಯಲಿಕ್ಕೆ ಬಾರದಷ್ಟು ಹರಿದುಹೋಗಿರು ವದು. ಅದಕ್ಕೆ ತೇಪೆ ಹಚ್ಚಬೇಕು. ತೇಪೆಯ ಅರಿವೆಯು ಸೀರೆಯ ಬಣ್ಣದ್ದೂ ಅದೇ ಮಾದರಿಯದೂ ಇರಬೇಕು. ಇಂಥ ಒಂದು ಅರಿವೆಯು ನನ್ನಲ್ಲಿ ಇರುವದು. ಪರಕಾರ, ಕುಪ್ಪಸ ಮುಂತಾದವುಗಳನ್ನು ಹೊಲಿಸು ವಾಗ ಹೆಚ್ಚಾಗಿ ಉಳಿದ ಅರಿವೆಯ ಚೂರುಗಳನ್ನು ಚೆಲ್ಲದೆ ಕಾಯ್ದಿಟ್ಟಿರ ಬೇಕು. ಈಗ ತೇಪೆಹಚ್ಚಲಿಕ್ಕೆ ಬೇಕಾಗುವ ಅರಿವೆಯನ್ನು ನಾನು ತೆಗೆದುಕೊಂಡು ಬರುವಷ್ಟರಲ್ಲಿ ನೀವು ಹೊಲಿಗೆಯ ಯಾವತ್ತೂ ಸಿದ್ಧತೆ ಯನ್ನು ಮಾಡಿರಬೇಕು," ಎಂದಳು. ಮೂವರೂ ಹುಡುಗೆಯರೂ ತಮ್ಮ

ತಮ್ಮ ಹೊಲಿಗೆಯ ಗಂಟುಗಳನ್ನು ತಂದರು. ಅವುಗಳೊಳಗಿಂದ ಸೂಜಿ, ಕತ್ತರಿ, ದಾರ ಇವುಗಳನ್ನು ತೆಗೆದರು. ಚೆನ್ನಾಗಿ ಹೊಲಿಯಲಿಕ್ಕೆ ಅವರಿಗೆ ಇನ್ನೂ ಬರುತ್ತಿರಲಿಲ್ಲ. ಗೊಂಬೆಗೆ ಕುಪ್ಪಸವನ್ನು ಮಾಡುವದಕ್ಕೋಸ್ಕರ ಇಟ್ಟಿದ್ದ ಒಂದು ಅರಿವೆಯ ಚೂರನ್ನು ಲಕ್ಷ್ಮಿಯು ಹೊರಗೆ ತೆಗೆದಳು. ಪಾರ್ವತಿಯು ಒಂದು ಹಣದ ಚೀಲವನ್ನು ಹೊಲಿಯಹತ್ತಿದಳು. ಶಾರದೆಯು ಬಲಗೈಯ ನಡುಬೆರಳಿಗೆ ಅಂಗುಸ್ತಾನವನ್ನು ಹಾಕಿಕೊಂಡು ಕುಳಿತಳು. ತಾಯಿಯು ಬಂದ ಕೂಡಲೆ ಶಾರದೆಯು—"ಅವ್ವಾ, ನಾನು ಯಾವ ಸೂಜಿಯನ್ನು ತೆಗೆದುಕೊಳ್ಳಲಿ?'' ಎಂದು ಕೇಳಿದಳು. ಅದಕ್ಕೆ ತಾಯಿಯು—''ಒಂದು ಮಧ್ಯಮ ತರದ ಸೂಜಿಯನ್ನು ತಕ್ಕೋ, ಅದರಲ್ಲಿ ನಿನ್ನ ಸೀರೆಯ ಬಣ್ಣದ ದಾರವನ್ನು ಪೋಣಿಸು. ತೇಪೆಯ ಎಳೆಗಳು ಸೀರೆಯ ಎಳೆಗಳೊಳಗೆ ಕೂಡಿಕೊಳ್ಳುವಂತೆ ತೇಪೆಯ ತುಂಡನ್ನು ಇಟ್ಟುಕೋ. ತೇಪೆಯ ಅಂಚನ್ನು ಮಡಿಚಿ ದುಂಡು ಕಟ್ಟು, ಆ ಮೇಲೆ ಸೀರೆಯ ಹರಿದ ಭಾಗದ ಅಂಚನ್ನು ಒಳಗೆ ಮಡಿಚಿ ಅದಕ್ಕೂ ದುಂಡು ಕಟ್ಟು. ಬಹಳ ಉದ್ದ ದಾರವನ್ನು ತಕ್ಕೊಳ್ಳಬೇಡ. ದುಂಡಿನ ಒಳಭಾಗದ ಕಡೆಗೆ ದಾರವು ಬರುವಂತೆ ಯಾವಾಗಲೂ ಎಚ್ಚರದಿಂದಿರಬೇಕು. ದಾರವನ್ನು ಬಹಳ ಜೋರಿನಿಂದ ಎಳೆಯಬೇಡ. ಟಿಬ್ಬಿಗಳು ಬಹಳ ಹತ್ತೆಯಾಗುವಂತೆ ಹಾಕಬೇಡ. ಅವು ಒಂದೇ ಸಾಲಿನಲ್ಲಿರಬೇಕು. ಅವುಗಳ ನಡುವಿನ ಅಂತರವು ಸಮವಿರಬೇಕು. ಹೊಲಿಯುವದಕ್ಕಿಂತ ಮೊದಲು ಅಂಚು ಮಡಿಚಿ ಎಳೆ ಹಾಕಿಕೊಳ್ಳಬೇಕು. ಹೊಲಿಗೆಯ ಕೆಲಸವು ಮುಗಿದ ಕೂಡಲೆ, ಸೂಜಿಯನ್ನು ಕಾಗದದಲ್ಲಿ ಚುಚ್ಚಿಡಬೇಡ; ಆದರೆ ಒಂದು ಉಣ್ಣೆಯ ಅರಿವೆಯ ಚೂರಿನಲ್ಲಿ ಚುಚ್ಚಿ ಮುಚ್ಚಿಡು. ಹೊಲಿಗೆಯ ಸಾಮಾನುಗಳನ್ನಿಡುವ ಗಂಟಿನಲ್ಲಿ ಸ್ವಲ್ಪ ಮೇಣವನ್ನೂ ಇಟ್ಟಿರು. ಹೊಲಿಯುವಾಗ ಅರಿವೆಗೆ ಮಡಿಕೆ ಬಿದ್ದರೆ ಅಥವಾ ಟಿಬ್ಬಿಗಳು ಒಂದು ಸಾಲಿನಲ್ಲಿ ಬೀಳದಿದ್ದರೆ ಹೊಲಿಗೆಯು

ಬಹಳ ಕೆಟ್ಟದು ಕಾಣುವದು," ಎಂದಳು. ತಾಯಿಯು ಮಾಡಿದ ಸೂಚನೆಗಳಂತೆಯೇ ಶಾರದೆಯು ತೇಪೆಹಚ್ಚಿದ್ದರಿಂದ ಅದು ಚೆನ್ನಾಗಿ ಕೂತಿತು.

---

## ೩೯ನೆಯ ಪಾಠ.

## ಸೆಕೆ.

ಅಕ್ಕನವರು—ಮಕ್ಕಳಿರಾ, ಈ ಹೊತ್ತು ಇಷ್ಟು ಯಾಕೆ ಸೆಕೆಯಾಗುವದು?

ಕಮಲೆ—ಯಾಕೆಂದರೆ, ಈ ದಿನ ಬಹಳ ಸೆಕೆ ಇರುವದು

ಅಕ್ಕ—ಸೆಕೆ ಅಂದರೇನು? ಅದು ಎಲ್ಲಿಂದ ಬರುವದು? ನಿಮಗೆ ಗೊತ್ತುಂಟೋ?

ಅನಸೂಯೆ—ಸೆಕೆ ಅಂದರೆ ಸೂರ್ಯನ ಜಳವು. ಇದು ಸೂರ್ಯನಿಂದ ಬರುವದು.

ಅಕ್ಕ—ಮಕ್ಕಳಿರಾ, ನೀವು ಅನ್ನುವದು ಸರಿ. ಸೆಕೆಯು ಸೂರ್ಯನಿಂದ ಬರುವದು. ಆದರೆ ನಾವು ಕುಳಿತಲ್ಲಿ ಸೂರ್ಯನ ಕಿರಣಗಳು ಬರುವದಿಲ್ಲವಷ್ಟೇ? ಹಾಗಾದರೆ ನಮಗೆ ಸೆಕೆಯಾಗುವ ಕಾರಣವೇನು?

ರಂಗು—ನಾವು ಬಿಸಿಲಿನಲ್ಲಿ ನಿಂತರೆ ಸೆಕೆಯಾಗುವದು. ಸೂರ್ಯನ ಬೆಳಕು ಸಾಲೆಯಲ್ಲಿ ಬೀಳುತ್ತದೆ.

ಅಕ್ಕ—ನಿನ್ನ ಉತ್ತರವು ಪೂರಾ ತಪ್ಪಲ್ಲ; ಆದರೆ ಸೂರ್ಯನ ಪ್ರಕಾಶವು ಸಾಲೆಯ ಹೊರಗೆ ಬಿದ್ದರೆ ಸಾಲೆಯಲ್ಲಿ ಸೆಕೆಯು ಯಾಕಾಗಬೇಕು?

ಕ—ಸೆಕೆಯು ತಾನೇ ಹೊರಗಿನಿಂದ ಒಳಗೆ ಬರುತ್ತದೆಂದು ನನಗೆ ತೋರುತ್ತದೆ.

ಅಕ್ಕ—ಸೂರ್ಯನಿಂದ ಸೆಕೆಯು ತಾನಾಗಿ ಬರುವದು. ಸೂರ್ಯನ ಕಿರಣಗಳು ಎಲ್ಲ ದಿಕ್ಕುಗಳಲ್ಲಿ ನೆಟ್ಟಗೆ ಹೋಗುತ್ತವೆ. ಇದೇ ಪ್ರಕಾರ ಬೆಂಕಿಯ ಅಥವಾ ಪ್ರಕಾಶದ ಕಿರಣಗಳು ಸಹ ಎಲ್ಲ ಕಡೆಗೆ ನೆಟ್ಟಗೆ ಪಸರಿಸುತ್ತವೆ. ಇಗೋ, ಇಲ್ಲಿರುವ ಇದ್ದಲಿಯ ಮೇಲೆ ನಾಲ್ಕು ಚಕ್ಕೆಗಳನ್ನಿಟ್ಟು ಬೆಂಕೀ ಕಡ್ಡಿಯಿಂದ ಅದನ್ನು ಹೊತ್ತಿಸುತ್ತೇನೆ. ಚಕ್ಕೆಗಳಿಗೆ ಬೆಂಕಿ ಹತ್ತಿತು. ಇದ್ದಲಿಯು ಸುಡಹತ್ತಿತು. ಇಲ್ಲಿ ಬರ್ರಿ, ಬೆಂಕಿಯ ಹತ್ತರ ನಿಮ್ಮ ಕೈಗಳನ್ನು ಹಿಡಿಯಿರಿ.

ಎಲ್ಲ ಹುಡುಗೆಯರು ಬೆಂಕಿಯ ಬಳಿಗೆ ಬಂದು ಕೈಯೊಡ್ಡಿ ಸೆಕೆ ಹತ್ತುತ್ತದೆಂದು ಹೇಳಿದರು. ಉರಿಯ ಮೇಲೆ ಬಹಳ ಸೆಕೆ ಹತ್ತುತ್ತದೆ. ಸುತ್ತಲಿನ ಭಾಗಗಳಲ್ಲಿ ಅದಕ್ಕಿಂತ ಕಡಿಮೆ ಜಳ ಹತ್ತುವದು.

ಅಕ್ಕ—ಉರಿಯ ನಾಲಗೆ ಮೇಲೆ ಹಾಯುತ್ತಿರುವದರಿಂದ ಬಹಳ ಸೆಕೆಯು ಬಡಿಯುವದು. ಆದರೆ ಉರಿಯ ಬದಲು ಅಲ್ಲಿ ಇದ್ದಲಿಯ ಕೆಂಡಗಳು ಇದ್ದರೆ, ಅವುಗಳ ಮೇಲಿದ್ದ ಭಾಗಕ್ಕೆ ಮಿಕ್ಕ ಭಾಗಗಳಿಗಿಂತ ಹೆಚ್ಚು ಜಳವು ಹತ್ತುತ್ತಿರಲಿಲ್ಲ. ಯಾಕೆಂದರೆ, ಸೆಕೆಯ ಕಿರಣಗಳು ಎಲ್ಲ ಕಡೆಗೆ ನೆಟ್ಟಗೆ ಹೋಗುತ್ತವೆ. ಸೂರ್ಯನು ಉಷ್ಣತೆಯನ್ನು ಬಿಡುವಂತೆ ಬೆಂಕಿಯು ಸೆಕೆಯನ್ನು ಬಿಡುವದೆಂದು ನಿಮಗೆ ಈಗ ಗೊತ್ತಾಯಿತಷ್ಟೇ? ಇನ್ನು ಸೂರ್ಯನ ಕಿರಣಗಳು ನಿಮಗೆ ತಾಕದಿದ್ದರೂ ಸೆಕೆಯು ಮಾತ್ರ ಯಾಕೆ ಆಗುತ್ತದೆಂಬದನ್ನು ನಾನು ಹೇಳುತ್ತೇನೆ. ಸೂರ್ಯನಿಂದಲೂ ಬೆಂಕಿಯಿಂದಲೂ ಹೊರಡುವ ಸೆಕೆಯ ಕಿರಣಗಳಿಂದ ಹೊರಗಿನ ಹವೆಯು ಕಾಯ್ದು ಒಳಗೆ ಬರುವದು. ಆದ್ದರಿಂದ ನಮಗೆ ಶಾಲೆಯೊಳಗೂ ಸೆಕೆಯೆನಿಸುವದು.

ಅನ—ಅಕ್ಕನವರೇ, ಸೆಕೆಯು ಒಳಗೆ ಬರಬಾರದೆಂದು ನಾವು ಬಾಗಿಲ ಮುಚ್ಚಿರುವೆವಲ್ಲ? ಆದರೂ ಇಲ್ಲಿ ಸೆಕೆಯಾಗುತ್ತದೆ.

ಅಕ್ಕ—ನಾವು ಕೋಣೆಯ ಎಲ್ಲ ಬಾಗಿಲುಗಳನ್ನು ಮುಚ್ಚಿಟ್ಟರೂ

ಹವೆಗೆ ಒಳಗೆ ಬರಲಿಕ್ಕೆ ಬೇಕಾದಷ್ಟು ದಾರಿ ಇರುವದು. ಬಾಗಿಲ ಮುಚ್ಚಿದರೆ ಒಮ್ಮೊಮ್ಮೆ ಬಹಳ ಸೆಕೆಯಾಗುವದು. ಯಾಕೆಂದರೆ, ಹೊರಗಿನ ತಂಪಾದ ಹವೆಯು ಒಳಗೆ ಬರುವದೂ ಒಳಗಿನ ಬೆಚ್ಚಗಿನ ಹವೆಯು ಹೊರಗೆ ಹೋಗುವದೂ ಕಟ್ಟಾಗುವದು. ನಮಗೆ ಸೆಕೆಯಾಗುವದಕ್ಕೆ ಇನ್ನೂ ಒಂದು ಕಾರಣವಿರುವದು. ನಮ್ಮ ಶರೀರವು ಸಹ ಬೆಂಕಿಯಂತೆಯೂ ಸೂರ್ಯನಂತೆಯೂ ಉಷ್ಣತೆಯನ್ನು ಹೊರಚಲ್ಲುತ್ತಿರುವದು. ಒಮ್ಮೊಮ್ಮೆ ನಮ್ಮ ದೇಹದ ಹೊರಗಿರುವ ಹವೆಯು ದೇಹದ ಒಳಗಿನ ಹವೆಗಿಂತ ಹೆಚ್ಚು ಉಷ್ಣವಿರುವದು, ಹಾಗು ನಮ್ಮ ದೇಹವನ್ನು ಸೇರುವದಕ್ಕೆ ಹವಣಿಸುವದು. ಸೂರ್ಯನ ಕಿರಣಗಳು ನೆಟ್ಟಗೆ ನಮ್ಮ ಮೇಲೆ ಬೀಳುವದರಿಂದ ನಮಗೆ ಬಹಳ ಸೆಕೆಯೆನಿಸುವದು. ಆದರೆ ಹವೆಯೊಳಗೆ ಹರಡಿರುವ ಉಷ್ಣತೆಯಿಂದ ನಮಗೆ ಇಷ್ಟು ತಾಪವಾಗುವದಿಲ್ಲ. ಈಗ ಹೊರಗೆ ಹೋಗಿ ಬಿಸಿಲಲ್ಲಿ ನಿಂತರೆ ಅತಿಶಯ ಸೆಕೆಯಾಗುವದು. ಇಗೋ, ಕೆಂಡದ ಮೇಲೆ ನಾನು ಒಂದು ಕಬ್ಬಿಣದ ಸಳಿಯ ಒಂದು ತುದಿಯನ್ನೂ ಕಟ್ಟಿಗೆಯ ಬರಲಿನ ಒಂದು ತುದಿಯನ್ನೂ ಇಟ್ಟಿದ್ದೇನೆ. ಇವೆರಡರ ಎರಡನೆಯ ತುದಿಗಳನ್ನು ನೀವು ಹಿಡಿಯಿರಿ. (ಎಲ್ಲರೂ ಮುಟ್ಟಿನೋಡಿ) ಕಬ್ಬಿಣದ ಸಳಿಯು ಬಹಳ ಕಾದಿರುವದರಿಂದ, ಕೈ ಸುಡುವದೆಂದೂ ಕಟ್ಟಿಗೆಯ ತುದಿಯು ಸ್ವಲ್ಪ ಬೆಚ್ಚಗಿರುವದೆಂದೂ ಹೇಳಿದರು.

ಅಕ್ಕ—ಮಕ್ಕಳಿರಾ, ನೀವು ಸರಿಯಾಗಿ ಹೇಳಿದಿರಿ; ಕೆಲವು ಪದಾರ್ಥಗಳು ಬಹಳ ತೀವ್ರವಾಗಿಯೂ ಕೆಲವು ಬಹಳ ಸಾವಕಾಶವಾಗಿಯೂ ಸೆಕೆಯನ್ನು ನುಂಗುತ್ತವೆ, ಮತ್ತು ಉಗುಳುತ್ತವೆ. ನಾಳೆ ಇವೆರಡೂ ಬಗೆಯ ಪದಾರ್ಥಗಳ ಹೆಸರನ್ನು ಬರೆದು ತರುವಿರೋ?

---

## ೪೦ನೆಯ ಪಾಠ.

# ಉರವಲ.

ಅಕ್ಕನವರು— ಸೆಕೆಯು ಯಾತರಿಂದ ಹೊರಡುತ್ತದೆಂಬದನ್ನು ನಾವು ನಿನ್ನೆ ಕಲಿತೆವು; ಆದರೆ ಸೆಕೆಯು ಎಂಥ ಪದಾರ್ಥವೆಂಬದನ್ನು ಹೇಳಲಾರೆವು. ನಮ್ಮಲ್ಲಿ ಅದು ಮಾಡುವ ಕಾರ್ಯದಿಂದ ಅದನ್ನು ನಾವು ತಿಳಕೊಳ್ಳಬೇಕಾಗುತ್ತದೆ. ಇರಲಿ, ಸೆಕೆಯ ಉಪಯೋಗವೇನು?

ಅನಸೂಯೆ— ಚಳಿಯಾದರೆ ಉರಿ ಕಾಸಿಕೊಳ್ಳುತ್ತೇವೆ; ಹಾಗು ಹಾಲು-ನೀರುಗಳನ್ನು ಬೆಂಕಿಯ ಮೇಲೆ ಬಿಸಿ ಮಾಡುತ್ತೇವೆ.

ಅಕ್ಕ— ತಂಗೀ, ನೀನು ಹೇಳಿದ್ದು ನಿಜವು. ಇವೆಲ್ಲ ಸೆಕೆಯ ಸಾಮಾನ್ಯ ಉಪಯೋಗಗಳು. ಆದರೆ ಸೆಕೆಯಿಲ್ಲದೆ ನಾವು ಒಂದು ಕ್ಷಣ ಸಹ ಬದುಕಲಾರೆವು. ದೇವರು ಸೆಕೆಯನ್ನು ಇಲ್ಲದಂತೆ ಮಾಡಿದರೆ ಮನುಷ್ಯರೂ ಮಿಕ್ಕ ಪ್ರಾಣಿಗಳೂ ಸತ್ತುಹೋಗುವವು. ಸೆಕೆಯಿಲ್ಲದಿದ್ದರೆ ನೀರೂ ಬೇರೆ ಪ್ರವಾಹಿ ಪದಾರ್ಥಗಳೂ ಬರ್ಫದಂತೆ ಗಟ್ಟಿಯಾಗುವವು. ಸೂರ್ಯನ ಉಷ್ಣತೆಯು ಕಡಿಮೆಯಾದರೆ ನಾವು ಉರಿ ಹಚ್ಚಿ ಕಾಸಿಕೊಳ್ಳುವೆವಷ್ಟೇ. ಆದರೆ ಸೂರ್ಯನ ಉಷ್ಣತೆಯು ಬೇಕಾದಷ್ಟು ಹೆಚ್ಚಾದರೂ ಆದರಿಂದ ನಮಗೆ ಅಡಿಗೆ ಮಾಡಿಕೊಳ್ಳಲಿಕ್ಕೆ ಬರುವದಿಲ್ಲ. ಉರಿ ಕಾಸಿಕೊಳ್ಳಲಿಕ್ಕೂ ಅಡಿಗೆ ಮಾಡಿಕೊಳ್ಳಲಿಕ್ಕೂ ನಾವು ಯಾವ ಉಷ್ಣತೆಯನ್ನು ಉಪಯೋಗಿಸುತ್ತೇವೆ?

ರಂಗು— ಇವಕ್ಕೆ ನಾವು ಬೆಂಕಿಯ ಉಷ್ಣತೆಯನ್ನು ಉಪಯೋಗಿಸುತ್ತೇವೆ.

ಅಕ್ಕ— ಬೆಂಕಿಯ ಉಷ್ಣತೆಯೆಂದರೆ ಕಟ್ಟಿಗೆಯನ್ನಾಗಲಿ ಇದ್ದಲಿಯನ್ನಾಗಲಿ ಹೊತ್ತಿಸುವದರಿಂದ ಹೊರಡುವ ಸೆಕೆಯೆಂದು ರಂಗು ಅನ್ನುತ್ತಾಳೆ. ಉಷ್ಣತೆ ಹೊರಡಿಸಲಿಕ್ಕೆ ಹೊತ್ತಿಸುವ ಪದಾರ್ಥಕ್ಕೆ ನಾವು ಉರ

ವಲವೆನ್ನುತ್ತೇನೆ. ಕಟ್ಟಿಗೆಯೂ ಇದ್ದಲಿಯೂ ಮುಖ್ಯ ಉರವಲಗಳು. ಉರವಲದ ಬೇರೆ ಪದಾರ್ಥಗಳು ನಿಮಗೆ ಗೊತ್ತಿದ್ದರೆ ಹೇಳಿರಿ.

ಕಮಲೆ—ಕುಳ್ಳು.

ಅಕ್ಕ—ಬಹಳ ಮಂದಿ ಕುಳ್ಳುಗಳನ್ನು ಉರವಲದಂತೆ ಉಪಯೋಗಿಸುವರು. ಆದರೆ ಕಟ್ಟಿಗೆ-ಕುಳ್ಳುಗಳಿಂದ ಬಹಳ ಹೊಗೆಯಾಗುವದು. ಇವಕ್ಕಿಂತ ಕಲ್ಲಿದ್ದಲಿಯು ಮೇಲಾದದ್ದು. ನೀವು ಎಷ್ಟು ಬಗೆಯ ಇದ್ದಲಿಗಳನ್ನು ನೋಡಿರುವಿರಿ?

ಅನ—ಕೆಂಡದ ಮೇಲೆ ನೀರು ಸುರುವಿದರೆ ಇದ್ದಲಿಯಾಗುವದು.

ಅಕ್ಕ—ನೀನು ಹೇಳಿದ್ದು ನಿಜವು; ಆದರೆ ಇದ್ದಲಿಯ ಪ್ರಕಾರಗಳೆಷ್ಟು?

ರಂ—ದಿಂಡಲ, ಜಾಲಿ, ಹುಣಿಸೆ ಮೊದಲಾದ ಗಿಡಗಳ ಕಟ್ಟಿಗೆಯಿಂದ ಇದ್ದಲಿಯನ್ನು ಮಾಡುವರು.

ಅಕ್ಕ— ಕಟ್ಟಿಗೆಯ ಕೆಂಡದ ಮೇಲೆ ನೀರು ಸುರುವಿ ಆರಿಸಿ ಮಾಡುವ ಇದ್ದಲಿಯು ಒಂದು ಪ್ರಕಾರದ್ದು. ಕೆಲವು ತರದ ಕಟ್ಟಿಗೆಯಿಂದಾಗುವ ಇದ್ದಲಿಯು ಬಹಳ ಮಿದುವಿರುವದರಿಂದ ಅದು ಅಡಿಗೆಗೆ ಬರುವದಿಲ್ಲ. ಅಕ್ಕಸಾಲಿಗರು ಬೆಳ್ಳಿ-ಬಂಗಾರಗಳನ್ನು ಕರಗಿಸುವದಕ್ಕಾಗಿ ಅಡವಿಗಳಲ್ಲಿ ತರತರದ ಗಿಡಗಳನ್ನು ಹುಗಿದು ಬೆಂಕಿ ಹಚ್ಚಿ ಮಾಡುವ ಇದ್ದಲಿಯನ್ನು ಉಪಯೋಗಿಸುತ್ತಾರೆ. ಇಂಥ ಇದ್ದಲಿಗೆ ಸೆಕೆ ಬಹಳ. ಉಗಿಬಂಡಿಯ ಎಂಜಿನಿಗೆ ಉಪಯೋಗಿಸುವ ಕಲ್ಲಿದ್ದಲಿಗೆ ಸೆಕೆ ಬಹಳ. ಅದನ್ನು ಖನಿಗಳಿಂದ ಅಗೆದು ತೆಗೆಯುವರು.

ಕ—ನೆಲದಲ್ಲಿ ಕಲ್ಲಿದ್ದಲಿಯು ಎಲ್ಲಿಂದ ಬರುವದು?

ಅಕ್ಕ— ಭೂಮಿಯಲ್ಲಿ ಲೋಹಗಳೂ ಕಲ್ಲುಗಳೂ ಇರುವಂತೆ ಕಲ್ಲಿದ್ದಲಿಯೂ ಇರುವದು. ಅದು ಎಲ್ಲಿಂದ ಬರುವದೆಂಬದನ್ನು ಮತ್ತೊಂದು ದಿವಸ ನಿಮಗೆ ಹೇಳುತ್ತೇನೆ.

ಅನ— ಉಗಿಬಂಡಿಯ ಎಂಜಿನಕ್ಕೆ ಹಾಕುವ ಕಲ್ಲಿದ್ದಲಿಯು ಗಟ್ಟಿಯಾಗಿಯೂ ಜಡವಾಗಿಯೂ ಹೊಳಪುಳ್ಳದ್ದಾಗಿಯೂ ಇರುವದು.

ಅಕ್ಕ— ಇದಕ್ಕೆ ಖನಿಜ ಇದ್ದಲಿಯೆಂಬ ಹೆಸರು. ನಮ್ಮ ದೇಶದಲ್ಲಿ ಇದನ್ನು ಬಹಳ ಉಪಯೋಗಿಸುವದಿಲ್ಲ. ಇಂಗ್ಲಂಡದಲ್ಲಿ ಪ್ರತಿಯೊಂದು ಮನೆಯವರು ಇದನ್ನು ಉಪಯೋಗಿಸುತ್ತಾರೆ. ನಾವು ದೀಪ ಹಚ್ಚಲಿಕ್ಕೆ ಉಪಯೋಗಿಸುವ ಚಿಮಣೀ ಎಣ್ಣೆಯಿಂದಲೂ ಅಡಿಗೆ ಮಾಡಿಕೊಳ್ಳಬಹುದು. ಇಕೋ ನೋಡು, ಯುರೋಪದ ಜನರು ಮಾಡಿದ ಈ ದೀಪವನ್ನು ಹಚ್ಚಿ ನಾನು ಚಹ ಮಾಡುತ್ತೇನೆ. ಶಾಸ್ತ್ರಜ್ಞರು ಇನ್ನೂ ಹಲವು ತರದ ಉರವಲವನ್ನು ಹುಡುಕಿ ತೆಗೆದಿರುವರು. ಅವುಗಳನ್ನೆಲ್ಲ ಈಗ ನಿಮಗೆ ತೋರಿಸುವದಾಗುವದಿಲ್ಲ.

---

## ೪೧ನೆಯ ಪಾಠ.

## ಹಾಲು ಕರೆಯುವದು.

ಸಾವಿತ್ರಿಯ ಸೋದರ ಮಾವನ ಮನೆಯು ಒಂದು ಹಳ್ಳಿಯಲ್ಲಿತ್ತು. ಆಕೆಯು ಹುಟ್ಟಿದಂದಿನಿಂದ ಅಲ್ಲಿಯೇ ಇದ್ದಳು. ದಿನಾಲು ನಸುಕಿನಲ್ಲಿ ಎದ್ದು ಮನೆಯ ಬಳಿಯಲ್ಲಿದ್ದ ದನದ ಹಕ್ಕೆಗೆ ಸೋದರತ್ತೆಯ ಕೂಡ ಹೋಗುತ್ತಿದ್ದಳು. ಹಾಲು ಕರೆಯುವ ದಿನದ ಹೊತ್ತು ತಪ್ಪಿತೆಂದರೆ ದನಗಳು ರಂಬಾಟ ಮಾಡುತ್ತವೆ; ಹಾಗು ಕುಣಿದಾಡಹತ್ತುತ್ತವೆ. ಅವುಗಳಿಗೆ ಸರಿಯಾದ ಹೊತ್ತಿಗೆ ಹರಗವನ್ನು ಕುಚ್ಚಿ ಹಾಕದಿದ್ದರೆ ಅವು ಒದರಾಡಹತ್ತುವವು. ಅಂಗಳದಲ್ಲಿ ಹರಗವನ್ನು ನಾಡಿ ಗೌಳಗಿತ್ತಿಯು ದಿನದಂತೆ ಅಲ್ಲಿಗೆ ಬಂದಳು. ಹಾಗು ಒಂದು ಬುಟ್ಟಿಯನ್ನು ಎಮ್ಮೆಯ ಮುಂದಿಟ್ಟು ಕರುವನ್ನು ಬಿಟ್ಟಳು. ಮಿಕ್ಕ ದನಗಳಿಗೂ ಹರಗವನ್ನಿಟ್ಟ ಕೂಡಲೆ ಅವು ಅದನ್ನು ತಿನ್ನಹತ್ತಿದವು. ಕರುವು ತುಸು ಹೊತ್ತು ಹಾಲು ಕುಡಿದ ಬಳಿಕ ಎಮ್ಮೆಯ ಕೆಚ್ಚಲವು ತೊರೆಯಿತು.

ಬಳಿಕ ಆಕೆಯು ಕರುವನ್ನು ಬಿಡಿಸಿ ಒಂದು ಗೂಟಕ್ಕೆ ಕಟ್ಟಿದಳು. ಅತ್ತೆಯು ಆಕೆಯ ಕೈಯಲ್ಲಿ ಒಂದು ತಂಬಿಗೆಯನ್ನು ಕೊಟ್ಟಳು. ಅದನ್ನು ತಕ್ಕೊಂಡು ಗೌಳಗಿತ್ತಿಯು ಎಮ್ಮೆಯ ಬಳಿಯಲ್ಲಿ ಹಿಂಡಲಿಕ್ಕೆ ಕುಳಿತಳು. ಹಾಲಧಾರೆಗಳು ಒತ್ತರದಿಂದ ಬರುವದನ್ನು ನೋಡಿ ಸಾವಿತ್ರಿಗೆ ಬಹಳ ಸೋಜಿಗವೆನಿಸಿತು. ಸ್ವಲ್ಪ ಹೊತ್ತಿನಲ್ಲಿ ತಂಬಿಗೆಯು ತುಂಬಿತು. ಬಳಿಕ ಅತ್ತೆಯು ಒಂದು ಸಣ್ಣ ಪಾತ್ರೆಯನ್ನು ಕೊಟ್ಟಳು. ಅದೂ ತುಂಬಲಿಕ್ಕೆ ಬಂತು. ಗೌಳಗಿತ್ತಿಯು ಒಂದು ಮೊಲೆಯನ್ನು ಮಾತ್ರ ಹಿಂಡಿದ್ದಿಲ್ಲ; ಅದನ್ನು ಕರುವಿಗೆಂದು ಹಾಗೇ ಬಿಟ್ಟಿದ್ದಳು; ಹಾಗು ಹಾಲು ಹಿಂಡುವದಾದ ಬಳಿಕ ಕರುವನ್ನು ಮತ್ತೆ ಬಿಟ್ಟಳು. ಅದು ಕೂಡಲೆ ಮೊಲೆಯುಣ್ಣಹತ್ತಿತು. ಬಳಿಕ ಗೌಳಗಿತ್ತಿಯು ಒಂದು ಆಕಳ ಬಳಿಗೆ ಹೋದಳು. ಅದರ ಕರುವು ಮೊಲೆಯುಣ್ಣುವ ಆತುರ ದಿಂದ ಅತ್ತಿಂದಿತ್ತ ಜಿಗಿದಾಡುತ್ತಿತ್ತು. ದನದ ಮುಂದೆ ಮುರುವಿಟ್ಟು ಕರುವನ್ನು ಬಿಟ್ಟಕೂಡಲೆ ಅದು ಮೊಲೆಯುಣ್ಣಹತ್ತಿತು. ಆಕಳ ಕೆಚ್ಚಲವು ತುಂಬಿದ ಕೂಡಲೆ ಗೌಳಗಿತ್ತಿಯು ಅದರ ಹಿಂದಿನ ಕಾಲುಗಳನ್ನು ಹಗ್ಗದಿಂದ ಕಟ್ಟಿದಳು.

ಸಾವಿತ್ರಿ—ಅತ್ತೇ, ಆಕಳ ಹಿಂಗಾಲನ್ನು ಹಗ್ಗದಿಂದ ಯಾಕೆ ಕಟ್ಟಿದಳು?

ಅತ್ತೆ—ಕಟ್ಟದಿದ್ದರೆ ಆಕಳು ಕಾಲು ಜಾಡಿಸಿ ಹಾಲತಂಬಿಗೆಯನ್ನು ಕೆಡವಿಬಿಡುವದು. ಎಮ್ಮೆಯು ಒದೆಯುವದಿಲ್ಲ; ಆದ್ದರಿಂದ ಅದರ ಕಾಲು ಕಟ್ಟಬೇಕಾಗುವದಿಲ್ಲ.

ಆಕಳ ಹಿಂಡಲಿಕ್ಕೆ ಬಹಳ ಹೊತ್ತು ಹತ್ತಲಿಲ್ಲ. ಬಹುತರವಾಗಿ ಆಕಳು ಎಮ್ಮೆಗಿಂತ ಕಡಿಮೆ ಹಾಲು ಕೊಡುವದು. ಆ ಆಕಳು ಈದು ಎಂಟು ತಿಂಗಳಾದದ್ದರಿಂದ ಅದು ಒಂದುವರೆ ಸೇರು ಹಾಲು ಕೊಟ್ಟಿತು. ಆಕಳನ್ನು ಹಿಂಡಲಿಕ್ಕೆ ಕುಳಿತ ಕೂಡಲೆ ಯಮುನೆಯು ಒಂದು ಸಣ್ಣ

ಪಾತ್ರೆಯನ್ನು ತಕ್ಕೊಂಡು ಓಡುತ್ತ ಬಂದು ಗೌಳಗಿತ್ತಿಗೆ—"ತಿಪ್ಪವ್ವಾ, ಈ ನನ್ನ ಪಾತ್ರೆಯಲ್ಲಿ ಹಿಂಡು. ನನಗೆ ನೊರೆಹಾಲು ಕುಡಿಯುವ ಮನಸ್ಸಾಗಿದೆ," ಎಂದಳು. ಗೌಳಗಿತ್ತಿಯು ಆಕೆಯ ಪಾತ್ರೆಯಲ್ಲಿ ಹಾಲು ಹಿಂಡಿಕೊಟ್ಟಳು. ಸಾವಿತ್ರಿಗೂ ನೊರೆಹಾಲು ಬೇಕೆಂದು ತಿಳಿದು ಅತ್ತೆಯು ಒಂದು ಸಣ್ಣ ಪಾತ್ರೆತುಂಬ ನೊರೆಹಾಲನ್ನು ಆಕೆಗೂ ಕೊಡಿಸಿದಳು. ಆಕಳು ಕೊನೆಗೆ ಹಿಂಡಿದ ಹಾಲು ಬಹಳ ರುಚಿಯಿರುತ್ತದೆ. ನೊರೆಹಾಲು ಕುಡಿದು ಯಮುನೆಗೆ ಆನಂದವಾದಂತೆ ಸಾವಿತ್ರಿಗೂ ಆಯಿತು. ಕರುವಿನ ದೆಸೆಯಿಂದ ಮೊಲೆಯನ್ನು ಬಿಡದ್ದರಿಂದ ಸಾವಿತ್ರಿಯು ಕರುವಿಗೆ ಹಾಲುಳಿಯಲಿಲ್ಲವೆಂದಳು.

ಗೌಳಗಿತ್ತಿ—ಕರುವು ದೊಡ್ಡದಾದ್ದರಿಂದ ಅದಕ್ಕೆ ಬಹಳ ಹೊತ್ತು ಮೊಲೆಯುಣಿಸಬೇಕಾಗುವದಿಲ್ಲ. ಅದು ಹುಲ್ಲು ತಿನ್ನುವದು. ಇದು ಬಹಳ ಕಳ್ಳ ಆಕಳು; ಕರುವಿಗೋಸ್ಕರ ಕೆಚ್ಚಲ ಏರಿಸಿಕೊಂಡು ಹಾಲು ಉಳಿಸಿಕೊಳ್ಳುವದು. ಈಗ ಕರು ಬಿಟ್ಟೆನೆಂದರೆ ಕೆಚ್ಚಲವು ತೊರೆಯುವದು. ಈ ಆಕಳು ಮೇಲಿಂದ ಮೇಲೆ ಹೀಗೆ ಮಾಡುವದರಿಂದ ಇದನ್ನು ಮತ್ತೊಮ್ಮೆ ಹಿಂಡಬೇಕಾಗುವದು.

ಅತ್ತೆಯವರು ಹಕ್ಕೆಯಿಂದ ಹೊರಡುವಾಗ ಒಂದು ಎಮ್ಮೆಯನ್ನು ಹಿಂಡಿಲ್ಲವೆಂದು ಸಾವಿತ್ರಿಯು ಹೇಳಿದಳು.

ಅತ್ತೆ—ಆ ಎಮ್ಮೆ ಹಾಲು ಕೊಡುವದಿಲ್ಲ, ಇನ್ನೆರಡು ಮೂರು ತಿಂಗಳಲ್ಲಿ ಅದು ಈಯುವದು.

ಸಾ—ಈ ಎಮ್ಮೆ ಎಷ್ಟು ಹಾಲು ಕೊಡುತ್ತದೆ?

ಅತ್ತೆ—ಅದು ಸರತಿಗೆ ಆರು ಸೇರು ಹಿಂಡುವದು. ಆ ಎಮ್ಮೆ ಈಯಿತೆಂದರೆ ಸರತಿಗೆ ಹತ್ತು ಸೇರು ಹಿಂಡುವದು.

## ೪೨ನೆಯ ಪಾಠ.

# ಮೊಸರು ಕಡೆಯುವದು.

ಸಾವಿತ್ರಿಯು ಮರುದಿವಸ ಮುಂಜಾನೆ ಎದ್ದ ಕೂಡಲೆ ಅಡಿಗೆಯ ಮನೆಯಲ್ಲಿ ಹೋದಳು. ಅಲ್ಲಿ ಒಂದು ಕಡೆಗೋಲೂ ಅದರ ಬಳಿಯಲ್ಲಿ ಮೊಸರು ತುಂಬಿದ ಮೂರು ಪಾತ್ರೆಗಳೂ ಇದ್ದವು. ಅತ್ತೆಯು ಮೊಸರು ಕಡೆದು ಬೆಣ್ಣೆ ತೆಗೆಯಲಿಕ್ಕೆ ಬೇಕಾದ ಸಿದ್ಧತೆಯನ್ನು ಮಾಡಿ ಕೊಳ್ಳುತ್ತಿದ್ದಳು. ಸಾವಿತ್ರಿಯನ್ನು ನೋಡಿ ಆಕೆಯು—"ಸಾವಿತ್ರೀ, ಇಂದು ಇಷ್ಟು ಬೆಳಗಿನಲ್ಲಿ ಎದ್ದು ಇಲ್ಲಿಗೆ ಯಾಕೆ ಬಂದೆ?" ಎಂದಳು.

ಸಾ—ಮುಂಜಾನೆ ನಾಲ್ಕು ಹೊಡೆದಾಗ ಮೊಸರು ಕಡೆಯುವ ಸಪ್ಪಳದಿಂದ ನನಗೆ ಎಚ್ಚರವಾಯಿತು. ಅದನ್ನು ನೋಡಲಿಕ್ಕೆ ಎದ್ದು ಬರುವಷ್ಟರಲ್ಲಿ ಮಾವನು ಹೋಗಬೇಡವೆಂದು ಹೇಳಿದನು. ಅತ್ತೆಯೇ, ಮೊಸರು ಕಡೆಯುವದಾಯಿತೇ? ಈ ಕೋಲು ಎಂಥದು?

ಅ—ಬೆಣ್ಣೆ ಹೊರಟ ಕೂಡಲೆ ಕಡೆಯುವದನ್ನು ನಿಲ್ಲಿಸಬೇಕು. ಇದಕ್ಕೆ ಕಡೆಗೋಲು ಎನ್ನುವರು. ಇದಕ್ಕೆ ಸುತ್ತಿರುವ ಹಗ್ಗದ ಎರಡು ತುದಿಗಳನ್ನು ಎರಡು ಕೈಗಳಿಂದ ಎದುರುಬದುರಾಗಿ ಹಿಡಿದು ಹಿಂದೆ ಮುಂದೆ ಜಗ್ಗಿ ಮೊಸರು ಕಡೆಯಬೇಕಾಗುವದು.

ಸಾ—ಅತ್ತೆಯೇ, ಮೊಸರು ಕಡೆಯುವದನ್ನು ನನಗೆ ತೋರಿಸು.

ಅ—ಈ ಗಡಿಗೆಯಲ್ಲಿರುವ ಮೊಸರನ್ನು ಕಡೆದಾಯಿತು. ಇಕೋ, ಇದರ ಮೇಲೆ ಬೆಣ್ಣೆ ಕಾಣುತ್ತದೆ. ಆದ್ದರಿಂದ ಇನ್ನು ಇದನ್ನು ಕಡೆಯ ಬಾರದು. ಮೊಸರು ಕಡೆಯುವದನ್ನು ನಿನಗೆ ನಾಳೆ ತೋರಿಸುತ್ತೇನೆ. ಹೀಗೆಂದು ಅತ್ತೆಯು ಗಡಿಗೆಯ ಬಾಯಿಗೆ ಕಟ್ಟಿದ ಹಗ್ಗವನ್ನು ಬಿಚ್ಚಿ ಕಡೆಗೋಲನ್ನು ಹೊರಗೆ ತೆಗೆದಳು.

ಸಾ—ಕಡೆಗೋಲಿನ ಈ ಕೊನೆಗೆ ಇದೇನಿರುವದು?

ಅ—ಇದೊಂದು ಕಟ್ಟಿಗೆಯ ಮುದ್ದೆ. ಮೊಸರು ಕಡೆಯುವಾಗ

ಇದು ಗಡಿಗೆಯೊಳಗೆ ಸುತ್ತಲು ತಿರುಗುವದು. ಇದರಿಂದ ಮೊಸರು ಮಜ್ಜಿಗೆಯಾಗಿ ಬೆಣ್ಣೆಯು ಮೇಲೆ ತೇಲಹತ್ತುವದು. ಗಡಿಗೆಯಲ್ಲಿ ಮೊಸರು ಹಾಕಿ ಸ್ವಲ್ಪ ನೀರು ಕೂಡಿಸಬೇಕಾಗುತ್ತದೆ. ಅರ್ಧಮರ್ಧ ಕಡೆದಾಗ ಹಾಗು ಪೂರಾ ಕಡೆದ ಮೇಲೆ ತುಸು ನೀರು ಹಾಕಬೇಕಾಗುವದು. ಚಳಿಗಾಲದಲ್ಲಿ ತುಸು ಬಿಸಿನೀರನ್ನು ಬೆರಿಸಬೇಕು.

ಸಾ—ಬಿಸಿನೀರು ಯಾಕೆ ಬೇಕು? ತಣ್ಣೀರು ಹಾಕಿದರೆ ಆಗುವದಿಲ್ಲೇನು?

ಅ—ಚಳಿಗಾಲದಲ್ಲಿ ಹಾಲು ಕಾಸಬೇಕಾಗುತ್ತದಷ್ಟೇ. ಕಾಸಿ ಹೆಪ್ಪು ಹಾಕದಿದ್ದರೆ ಅದು ಮೊಸರಾಗುವದಿಲ್ಲ. ಚಳಿಗಾಲದಲ್ಲಿ ಬಿಸಿ ನೀರು ಹಾಕದಿದ್ದರೆ ಮಜ್ಜಿಗೆಯೂ ಬೆಣ್ಣೆಯೂ ಬೇರೆ ಬೇರೆ ಆಗುವದಿಲ್ಲ. ಇಕೋ ನೋಡು, ನಾನು ಬೆಣ್ಣೆ ತೆಗೆಯುತ್ತೇನೆ ಎಂದು ಅತ್ತೆಯು ಗಡಿಗೆಯೊಳಗೆ ಕೈಹಾಕಿ ಬೆಣ್ಣೆಯ ಮುದ್ದೆಗಳನ್ನು ತೆಗೆಯ ಹತ್ತಿದಳು. ಒಂದು ಸಣ್ಣ ಗಡಿಗೆ ತುಂಬ ಬೆಣ್ಣೆ ಬಂತು. ಮೇಲೆ ಬಂದ ಬೆಣ್ಣೆಯನ್ನು ತೆಗೆದ ಬಳಿಕ ಅತ್ತೆಯು ಪಾತ್ರೆಯ ಒಳಗೆ ಪೂರಾ ಕೈಹಾಕಿ ಮಜ್ಜಿಗೆಯನ್ನು ಚೆನ್ನಾಗಿ ಕಲಕಿದಳು.

ಸಾ—ಮಜ್ಜಿಗೆಯನ್ನು ಯಾಕೆ ಇಷ್ಟು ಕಲಕುವಿರಿ?

ಅ—ಕಲಕದಿದ್ದರೆ, ತುಸು ಬೆಣ್ಣೆಯು ಮಜ್ಜಿಗೆಯೊಳಗೆ ಉಳಿಯುವದು. ಮಜ್ಜಿಗೆಯನ್ನು ಚೆನ್ನಾಗಿ ಕಲಕಿದರೆ ಬೆಣ್ಣೆಯ ಕಣಗಳು ಒತ್ತಟ್ಟಿಗಾಗಿ ನಡುವೆ ಬರುವವು. ಇಕೋ ನೋಡು, ಗಡಿಗೆಯ ನಡುವೆ ಏನು ಕಾಣುತ್ತದೆ?

ಸಾವಿತ್ರಿಯು ತುಸು ಹೊತ್ತು ಲಕ್ಷ್ಯಗೊಟ್ಟು ನೋಡಿ—ಅತ್ತೆಯೇ, ನೀನು ಹೇಳುವದು ನಿಜವು. ಮಜ್ಜಿಗೆಯು ಅಲ್ಲಾಡದೆ ನಿಂತಿರುವದು. ಅದರ ನಡುವೆ ಬೆಣ್ಣೆಯ ಮುದ್ದೆಯು ಕಾಣುತ್ತದೆ ಎಂದಳು.

ಅತ್ತೆಯು ಮಜ್ಜಿಗೆಯನ್ನು ಮತ್ತೆ ಕಲಕಿ ಸಣ್ಣ ಬೆಣ್ಣೆಯ ಮುದ್ದೆ

ಯನ್ನು ತೆಗೆದಳು; ಹಾಗೂ ಹೆಬ್ಬೆಟ್ಟಿನಿಂದ ಕಡೆಗೋಲಿಗೆ ಹತ್ತಿದ ಬೆಣ್ಣೆಯನ್ನು ಗೀರಿ ತೆಗೆದಳು. ಗಡಿಗೆಯೊಳಗಿನ ಮಜ್ಜಿಗೆಯನ್ನು ದೊಡ್ಡ ಗಡಿಗೆಗಳಲ್ಲಿಯೂ ಕಲಾಯಿ ಮಾಡಿಸಿದ ಪಾತ್ರೆಗಳಲ್ಲಿಯೂ ಸುರುವಿದಳು. ಕಡೆಗೋಲನ್ನೂ, ಗಡಿಗೆಗಳನ್ನೂ, ಮಿಕ್ಕ ಪದಾರ್ಥಗಳನ್ನೂ ಬಿಸಿ ನೀರಿನಿಂದ ತೊಳೆದಳು. ಮೊಸರು ಕಡೆಯುವಾಗ ಗಡಿಗೆಯು ಸರಿ ದಾಡಬಾರದೆಂದು ಇಟ್ಟ ಸಿಂಬೆಯನ್ನು ಗೂಟಕ್ಕೆ ಹಾಕಿದಳು. ಬೆಣ್ಣೆ ತುಂಬಿದ ಗಡಿಗೆಯನ್ನು ಕಪಾಟನಲ್ಲಿಟ್ಟಳು. ನೆಲದ ಮೇಲೆ ಮಜ್ಜಿಗೆ ಸಿಡಿದದ್ದರಿಂದ ಅದನ್ನೂ ಸ್ವಚ್ಛ ಮಾಡಿದಳು.

---

### ೪೩ನೆಯ ಪಾಠ.

## ಹಾಲೂ ಕೆನೆಯೂ.

ಅಕ್ಕನವರು—ಸಾವಿತ್ರೀ, ನಿನ್ನ ತಮ್ಮ ಎಷ್ಟು ಚೆಲುವನು! ಮೊನ್ನೆ ನಾನು ನಿನ್ನ ಭೆಟ್ಟಿಗೆ ಬಂದಾಗ ಬಹಳ ಚೆಂದ ಕಂಡನು.

ಸಾವಿತ್ರಿ—ಅಕ್ಕನವರೇ, ಅವನು ನೆಟ್ಟಗೆ ಬೆಳೆದಿದ್ದಾನೆ. ನಿನ್ನೆಗೆ ಅವನಿಗೆ ನಾಲ್ಕು ತಿಂಗಳು ತುಂಬಿ ಐದರಲ್ಲಿ ಬಿತ್ತು. ಕೂಸು ಮೈ ಹಿಡಿದು ಬೆಳೆಯಹತ್ತಿದೆ.

ಅ—ಅವನಿಗೆ ಹೊಟ್ಟೆಗೆ ಏನು ಕೊಡುತ್ತೀರಿ?

ಸಾ—ಈಗ ಏನೂ ಕೊಡುವದಿಲ್ಲ; ಇನ್ನೂ ಅವನಿಗೆ ತಿನ್ನಲಿಕ್ಕೆ ಬರುವದಿಲ್ಲ. ಮೊಲೆಹಾಲಿನ ಮೇಲೆಯೇ ಇದ್ದಾನೆ.

ಅ—ಹಾಲೇ ಹಸುಗೂಸುಗಳಿಗೆ ತಕ್ಕ ಆಹಾರವು. ಕೂಸುಗಳಿಗೆ ಕೆಲವು ತಿಂಗಳವರೆಗೆ ಹಾಲಿನ ಹೊರತು ಬೇರೆ ಏನೂ ಹಾಕಬಾರದು. ಪಶುಗಳ ಚಿಕ್ಕ ಕರುಗಳೂ ಬರೇ ಹಾಲಿನ ಮೇಲೆ ಇರುತ್ತವೆ. ಕೂಸಿನ ಪೋಷಣೆ ಬೆಳವಣಿಗೆಗಳಿಗೆ ಬೇಕಾಗುವ ಎಲ್ಲ ಪದಾರ್ಥಗಳು ತಕ್ಕ

ಪ್ರಮಾಣದಿಂದ ಹಾಲಿನಲ್ಲಿರುವವು. ಆದದರಿಂದ ಅದು ಉತ್ಕೃಷ್ಟ ಆಹಾರವೆಂದು ಎಣಿಸಲ್ಪಟ್ಟಿರುವದು.

ಕಮಲೆ—ಹೀಗಂದರೇನು ?

ಅ—ಶರೀರದಲ್ಲಿರುವ ಎಲುವು ಮಾಂಸ ರಕ್ತ ಮೊದಲಾದವು ಬೆಳೆಯು ಲಿಕ್ಕೂ ದೇಹದಲ್ಲಿ ತಕ್ಕಷ್ಟು ಉಷ್ಣತೆಯು ಉಳಿಯಲಿಕ್ಕೂ ಅತ್ಯವಶ್ಯ ವಾದ ಎಲ್ಲ ಪದಾರ್ಥಗಳು ಹಾಲಿನಲ್ಲಿ ಒಳ್ಳೆಯ ತಕ್ಕ ಪ್ರಮಾಣದಿಂದ ಇರುವವು.

ಕ—ಈ ಪದಾರ್ಥಗಳು ಯಾವವು ?

ಅ—ಈ ಪದಾರ್ಥಗಳನ್ನು ನಾನು ನಿಮಗೆ ತೋರಿಸುತ್ತೇನೆ. ಸರ ಸ್ವತೀ, ಹೋಗು, ಆ ಕೋಣೆಯಲ್ಲಿ ಮುಚ್ಚಿಟ್ಟದ್ದೊಂದು ತಾಟು ಇರು ವದು. ಅದನ್ನು ಎಚ್ಚರದಿಂದ ತಕ್ಕೊಂಡು ಬಾ.

ಸಾಲೆಯಲ್ಲಿ ನಡೆಯುವ ವಾಡಿಕೆಯ ಪಾಠಗಳನ್ನು ಕೇಳುತ್ತ ಕೂಡ್ರುವದಕ್ಕಿಂತ ಅವಲೋಕನ ಮಾಡುವದೇನಾದರೂ ಇದ್ದರೆ ಹುಡು ಗೆಯರಿಗೆ ಹೆಚ್ಚು ಸಂತೋಷವಾಗುವದು. ಸರಸ್ವತಿಯು ಏನು ತರು ವಳೋ, ಅಕ್ಕನವರು ಏನು ತೋರಿಸುವರೋ, ಎಂದು ಹುಡುಗೆಯರೆಲ್ಲರು ಆತುರಪಡಹತ್ತಿದರು. ಹಾಲು ಎಂಥ ಪದಾರ್ಥವು ಎಂದು ಅಕ್ಕನವರು ಕೇಳಿದರು. ಒಂದು ಹುಡುಗೆಯು ಅದು ಬೆಳ್ಳಗಿರುವದೆಂದೂ, ಮತ್ತೊ ಬ್ಬಳು ಸವಿಯಿರುವದೆಂದೂ, ಮೂರನೆಯವಳು ನೀರಿಗಿಂತ ಮಂದವಿರುವ ದೆಂದೂ, ನಾಲ್ಕನೆಯವಳು ಅದರೊಳಗಿಂದ ಆಚೆಯ ಪದಾರ್ಥಗಳು ಕಾಣುವದಿಲ್ಲವಾದದರಿಂದ ಅಪಾರದರ್ಶಕವೆಂದೂ ಉತ್ತರ ಕೊಟ್ಟಳು. ಅಷ್ಟರಲ್ಲಿ ಸರಸ್ವತಿಯು ತಾಟನ್ನು ತಂದಳು. ಅಕ್ಕನವರು ಅದರ ಮುಚ್ಚ ಳವನ್ನು ತೆಗೆದರು. ಅದರಲ್ಲಿ ಮೂರು ಕಾಜಿನ ಬಟ್ಟಲು, ಒಂದು ಚೂರಿ, ಒಂದು ನಿಂಬೆಯ ಹಣ್ಣು, ಮಲಮಲಿಯ ಒಂದು ಅರಿವೆ ಇಷ್ಟು ಇದ್ದವು.

ಅಕ್ಕನವರು ಕೈಯಲ್ಲಿ ಹಾಲಿನ ಬಟ್ಟಲವನ್ನು ತಕ್ಕೊಂಡು—ಬೆಳಿಗ್ಗೆ ಎಂಟು ಗಂಟೆಗೆ ಇದರಲ್ಲಿ ನಾನು ಹಾಲು ಹಾಕಿಟ್ಟಾಗ ಅದು ಮೇಲಿಂದ ಕೆಳತನಕ ಒಂದೇ ಸವನಾಗಿತ್ತು. ಈಗ ಹಾಗೆಯೇ ಉಳಿದಿರುವದೋ? ನೋಡಿರಿ. ಕಾಜು ಪಾರದರ್ಶಕವಿರುವದರಿಂದ ಒಳಗಿನ ಹಾಲು ಕಾಣುವದಷ್ಟೇ.

ಸಾ—ಮೇಲಿನ ಹಾಲು ದಟ್ಟಾಗಿದೆ, ಹಾಗೂ ಅದು ತುಸು ಹಳದೀ ಬಣ್ಣವಾಗಿ ಕಾಣುವದು.

ಅ—ಅದೇ ಹಿಂಡಿದ ಹಾಲು ಹೀಗಿರುವದಿಲ್ಲ. ಹಾಲು ಹಿಂಡಿ, ಗಲ್ಲಿಸದೆ ಹಾಗೇ ತುಸು ಹೊತ್ತು ಇಟ್ಟರೆ, ಅದರಲ್ಲಿ ಎರಡು ಭಾಗಗಳಾಗಿ ಹಳದಿಯ ಭಾಗವು ಮೇಲೆ ಬರುವದು. ಇದರ ಹೆಸರೇನು?

ಸಾ—ಇದೇ ಕೆನೆ.

ಅ—ಇದೇನಿರಬಹುದು?

ಸಾ—ಕೆನೆಯಲ್ಲದೆ ಮತ್ತೇನು?

ಅ—ಹೀಗೆಂದರೆ, ಕೆನೆಯ ಬಗ್ಗೆ ನಮಗೆ ಹೆಚ್ಚೇನು ಗೊತ್ತಾಯಿತು?

ಸಾ—ಹಾಲಿನ ಮೇಲಿರುವದೇ ಕೆನೆಯು.

ಅ—ಕೆನೆಯು ಎಲ್ಲಿರುತ್ತದೆಂಬದನ್ನು ಮಾತ್ರ ನೀನು ಹೇಳಿದಿ.

ಕ—ಕೆನೆಯು ಹಾಲಿನೊಳಗಿನ ಒಂದು ಪದಾರ್ಥವು.

ಅ—ಹೌದು, ಅದು ಯಾವ ಪದಾರ್ಥವು?

ರಂ—ಮೇಲೆ ಬಂದು ನಿಲ್ಲುವ ಪದಾರ್ಥವು.

ಅ—ಇದಾದರೂ ಪೂರ್ಣ ಉತ್ತರವಲ್ಲ. ಇಕೋ ನೋಡಿರಿ, ಈ ಚಮಚೆಯಿಂದ ಕೆನೆಯನ್ನು ತೆಗೆಯುತ್ತೇನೆ.

## ೪೪ನೆಯ ಪಾಠ.

# ಬೆಣ್ಣೆಯೂ ತುಪ್ಪವೂ.

ಚಮಚೆಯಲ್ಲಿ ತೆಗೆದುಕೊಂಡ ಕೆನೆಯನ್ನು ಬಟ್ಟಲದಲ್ಲಿ ಹಾಕುವಾಗ ಅಕ್ಕನವರು ಅದರ ಒಂದು ಹನಿಯನ್ನು ಸಣ್ಣ ಕಾಗದದ ಮೇಲೆ ಬೀಳಗೊಟ್ಟರು. ಆ ಕಾಗದವನ್ನು ತಕ್ಕೊಂಡು ಅಕ್ಕನವರು—ಈ ಕಾಗದದ ಮೇಲೆ ಕಲೆ ಬಿದ್ದಿದೆ ನೋಡಿರಿ! ಇದು ಹ್ಯಾಗೆ ಕಾಣುತ್ತದೆ? ಎಂದರು.

ಸಾವಿತ್ರಿ—ಇದು ಹೆಡಸಾಗಿ ಕಾಣುವದು.

ಅ—ಹೌದು, ಕೆನೆಯು ಹೆಡಸಿರುವದು. ಅದನ್ನು ಮುಟ್ಟಿದರೆ ಜಿಗುಟು ಹತ್ತುವದು. ಈ ಹೆಡಸಿನ ಪದಾರ್ಥಕ್ಕೆ ನಾವು ಬೆಣ್ಣೆ ಎನ್ನುತ್ತೇವೆ. ಬೆಣ್ಣೆ ತಿಂದರೆ ಶರೀರದಲ್ಲಿ ಉಷ್ಣತೆಯೂ ನೆಣವೂ ಉಂಟಾಗುವವು. ಆಕಳ ಇಲ್ಲವೆ ಆಡಿನ ಹಾಲಿಗಿಂತ ಎಮ್ಮೆಯ ಹಾಲಿನಲ್ಲಿ ಬೆಣ್ಣೆ ಹೆಚ್ಚು. ಅದರಲ್ಲಿ ಹನ್ನೆರಡರಲ್ಲಿ ಒಂದು ಭಾಗ ಬೆಣ್ಣೆ ಇರುತ್ತದೆ. ಆ ಹಾಲನ್ನು ಒಂದು ಸೀಸೆಯಲ್ಲಿಟ್ಟರೆ, ಬೆಣ್ಣೆಯು ಮೇಲೆ ಬಂದು ಸೀಸೆಯ ಹನ್ನೆರಡರಲ್ಲಿ ಒಂದು ಭಾಗವನ್ನು ವ್ಯಾಪಿಸುವದು. ಹಾಲಿನಲ್ಲಿ ಬೆಣ್ಣೆಯ ಕಣಗಳಿರುತ್ತವೆ. ಆದರೆ ಅವು ಬರಿಗಣ್ಣಿಗೆ ಕಾಣುವದಿಲ್ಲ; ಹಾಲನ್ನು ಗಲ್ಲಿಸದೆ ಇಟ್ಟರೆ ತುಸು ಹೊತ್ತಿನಲ್ಲಿ ಅವು ಮೇಲಕ್ಕೆ ಬರುವವು. ಯಾಕಂದರೆ ಅವು ಹಾಲಿನಲ್ಲಿರುವ ಮಿಕ್ಕ ಪದಾರ್ಥಗಳಿಗಿಂತ ಹಗುರಿರುವವು. ಹಾಲಿನಿಂದ ಬೆಣ್ಣೆಯನ್ನು ಹ್ಯಾಗೆ ತೆಗೆಯುತ್ತೇವೆ?

ಸಾ—ನಮ್ಮ ಸೋದರ ಮಾವನ ಮನೆಗೆ ಹೋದಾಗ ಬೆಣ್ಣೆ ತೆಗೆಯುವದನ್ನು ನಾನು ನೋಡಿದ್ದೇನೆ. ಅತ್ತೆಯು ಹಾಲನ್ನು ಕಾಸಿ ಹೆಪ್ಪು ಹಾಕಿದಳು. ಮೊಸರಿನ ಮೇಲೆ ಕೆನೆಯು ಬಂದಿತ್ತು. ಕಡೆಗೋಲಿನಿಂದ ಮೊಸರು ಕಡೆಯಲು ಬೆಣ್ಣೆಯು ತೇಲಹತ್ತಿತು.

ಅ—ತಂಗೀ, ನೀನು ಹೇಳಿದ್ದೆಲ್ಲ ನಿಜವು. ನಮ್ಮ ದೇಶದಲ್ಲಿ ಇದೇ ರೀತಿಯಿಂದ ಬೆಣ್ಣೆ ತೆಗೆಯುವರು. ಚಳಿನಾಡುಗಳಲ್ಲಿ ಹಾಲು ಹೆರುವ

ದಿಲ್ಲ. ಆದದರಿಂದ ಆ ನಾಡುಗಳಲ್ಲಿ ಹಾಲನ್ನೇ ಕಡೆದು ಬೆಣ್ಣೆ ತೆಗೆಯು ತ್ತಾರೆ. ಆ ಬೆಣ್ಣೆಯಲ್ಲಿ ತುಸು ಉಪ್ಪನ್ನೂ ಮೆಣಸಿನ ಪುಡಿಯನ್ನೂ ಹಾಕಿಟ್ಟರೆ ಅದು ಬಹಳ ದಿನ ತಡೆಯುತ್ತದೆ. ಹಾಲು ಕಡೆಯುವದ ರಿಂದ ಬೆಣ್ಣೆಯ ಕಣಗಳ ಹೊಂದಿಕೆಯು ಒಡೆದು ಬೆಣ್ಣೆಯು ಒಟ್ಟು ಗೂಡುವದು.

ಕಮಲೆ—ಹಾಲು ಕಡೆದರೆ ಬೆಣ್ಣೆ ಹ್ಯಾಗೆ ಬಂದೀತು ?

ಅ—ತಂಗೀ, ಹಾಲು ಕಡೆದರೂ ಬೆಣ್ಣೆ ಬರುತ್ತದೆ. ಹಳ್ಳಿಯ ಜನರು ಕೊಡಗಟ್ಟಲೆ ಹಾಲು ತರುವರು. ಹಾದಿಯಲ್ಲಿ ಹಾಲು ಹೊಯ್ದಾ ಡುವದರಿಂದ ಬೆಣ್ಣೆಯು ಮೇಲೆ ಬಂದಿರುವದು. ಇತ್ತಲಾಗಿ ನಮ್ಮ ದೇಶ ದಲ್ಲಿ ತರಿಸಿದ ಹೈನದ ಯಂತ್ರಗಳನ್ನು ನೋಡಲಿಕ್ಕೆ ನಿಮ್ಮನ್ನು ನಾನು ಕರಕೊಂಡು ಹೋಗುವೆನು. ಆಗ ನಿಮಗೆ ಈ ಮಾತು ಚೆನ್ನಾಗಿ ತಿಳಿ ಯುವದು. ಈ ಪಾತ್ರೆಯಲ್ಲಿ ಬೆಣ್ಣೆ ತೆಗೆದ ಹಾಲು ಇರುವದು. ಇದರಲ್ಲಿ ಏನೇನು ಇರುವದೆಂಬದನ್ನು ನೋಡೋಣ. ಸುಂದರೀ, ಈ ನಿಂಬೆಯ ಹಣ್ಣನ್ನು ಹೆಚ್ಚಿ ಇದರಲ್ಲಿ ತುಸು ಹಿಂಡು. ನಿಂಬೆಯ ರಸದಿಂದ ಹಾಲು ಹ್ಯಾಗಾಯಿತು, ನೋಡಿರಿ. ಅದರ ಬಣ್ಣವು ಬೇರೆಯಾಯಿತು, ಹಾಲು ತಿಳಿಯಾಯಿತು, ಹಾಗು ನೀರಿನಂತೆ ಪಾರದರ್ಶಕವಾಯಿತು. ಗುಳಿಗೆ ಯಂಥ ಕೆಲವು ಕಣಗಳು ತಳದಲ್ಲಿ ಕೂತವು, ಕೆಲವು ತೇಲಹತ್ತಿದವು. ಅಕ್ಕನವರು ಕಮಲೆಗೆ—ಇಕೋ, ಈ ಮಲಮಲಿಯಿಂದ ಈ ಬಟ್ಟಲದ ಬಾಯಿ ಕಟ್ಟು. ಹಾಗು ಅದರಲ್ಲಿ ಈ ಹಾಲನ್ನು ಸುರುವು, ಎಂದರು.

ಕಮಲೆಯು ಹಾಗೆ ಮಾಡಿದಳು. ಹಾಲಿನಲ್ಲಿದ್ದ ನೀರೆಲ್ಲ ಅರಿವೆ ಯೊಳಗಿಂದ ಕೆಳಗೆ ಇಳಿಯಿತು. ದಟ್ಟಾದ ಪದಾರ್ಥವು ಅರಿವೆಯ ಮೇಲೆ ಮುದ್ದೆಯಾಗಿ ನಿಂತಿತು. ಇದನ್ನು ಎಲ್ಲ ಹುಡುಗೆಯರಿಗೆ ತೋರಿಸಿ ಅಕ್ಕ ನವರು—ಮೇಲೆ ನಿಂತ ಈ ಮುದ್ದೆಗೆ ಕಟ್ಟುಮೊಸರೆನ್ನುವರು. ಇದು ಹಾಲಿನ ಸಾರವು; ಹಾಗು ಉತ್ಕೃಷ್ಟವಾದ ಆಹಾರವು. ಯಾಕಂದರೆ, ಇದರಿಂದ ಮಾಂಸವು ಬೆಳೆಯುವದು, ಎಂದು ಹೇಳಿದರು.

ಸಾ—ಮಿಠಾಯಿಗಾರರು ಈ ರೀತಿಯಿಂದ ಜೋವೆ ತೆಗೆಯುವದಿಲ್ಲ.

ಅ—ಹೌದು ಮಗಳೇ, ಅವರು ತೆಗೆಯುವ ಜೋವೆಗೂ ಈ ಕಟ್ಟುಮೊಸರಿಗೂ ಭೇದವಿರುವದು. ಯಂತ್ರದಿಂದ ಹಾಲಿನ ಬೆಣ್ಣೆ ತೆಗೆದು ಮಿಕ್ಕ ಹಾಲಿನಿಂದ ಮಾಡಿದ ಕಟ್ಟುಮೊಸರನ್ನು ಇದು ಹೋಲುವದು.

---

### ೪೫ನೆಯ ಪಾಠ.

## ಮಜ್ಜಿಗೆಯೂ ತುಪ್ಪವೂ.

ಅಕ್ಕನವರು—ಅರಿವೆಯೊಳಗೆ ಕಟ್ಟುಮೊಸರು ಉಳಿಯಿತು; ಸಾವಿತ್ರೀ, ಆ ಬಟ್ಟಲದಲ್ಲಿ ಏನು ಉಳಿದಿರುವದು? ನೋಡು.

ಸಾವಿತ್ರಿ—ಅದು ಬಿಳಿಯ ನೀರಿನಂತೆ ಕಾಣುತ್ತದೆ.

ಅ—ಹೌದು, ರುಚಿ ನೋಡಿ ಅದು ಹ್ಯಾಗೆ ಹತ್ತುತ್ತದೆಂಬದನ್ನು ಹೇಳು.

ಕಮಲೆ—ಇದು ಸವಿಸವಿ ಉಪ್ಪುಪ್ಪು ಹತ್ತುತ್ತದೆ; ಅಂತೂ ಇದರ ರುಚಿಯು ಇಂಥದೆಂದು ಹೇಳುವಂತಿಲ್ಲ.

ಅ—ಇದಕ್ಕೆ ಮಜ್ಜಿಗೆನೀರು ಎಂಬ ಹೆಸರು; ಅದು ನೀರಿನಂತೆ ಇರುವದು. ಇದರಲ್ಲಿ ಸ್ವಲ್ಪ ಸಕ್ಕರೆಯೂ ಸ್ವಲ್ಪ ಉಪ್ಪೂ ಇರುವವು. ಇದನ್ನು ಹಾಗೆಯೇ ಇಟ್ಟು ಇಂಗಗೊಟ್ಟರೆ ನೀರು ಉಗಿಯಾಗಿ ಹೋಗಿ ತುಸು ಸಕ್ಕರೆಯೂ ತುಸು ಉಪ್ಪೂ ಮಾತ್ರ ಉಳಿಯುವವು. ಈಗ ಹಾಲಿನಲ್ಲಿರುವ ಎಲ್ಲ ಪದಾರ್ಥಗಳನ್ನು ಯಾರು ಹೇಳುತ್ತೀರಿ?

ಸರಸ್ವತಿ— ಬೆಣ್ಣೆ, ಕಟ್ಟುಮೊಸರು, ಸಕ್ಕರೆ, ಉಪ್ಪು.

ಅ—ಹಾಲಿನ ಬಹಳ ಭಾಗವು ನೀರಿರುವದೆಂಬದನ್ನು ಹೇಳಲಿಕ್ಕೆ ಮರೆತುಬಿಟ್ಟೆ; ಎಮ್ಮೆಯ ಹಾಲಿನಲ್ಲಿ ನೂರರಲ್ಲಿ ಎಂಬತ್ತೊಂದು ಭಾಗ ನೀರು, ಆರು ಭಾಗ ಕಟ್ಟುಮೊಸರು ೭ ಭಾಗ ನೆಣ, ನಾಲ್ಕು ಭಾಗ

ಸಕ್ಕರೆ, ನಾಲ್ಕು ಭಾಗ ಹಾಲಿನ ಸತ್ವ, ಹಾಗು ಒಂದಕ್ಕಿಂತ ಕಡಿಮೆ ಭಾಗ ಉಪ್ಪು ಇರುವವು. ಆಕಳ ಹಾಲಿನಲ್ಲಿ ನೂರರಲ್ಲಿ ಎಂಬತ್ತೇಳು ಭಾಗ ನೀರು ಇರುವದರಿಂದ ಮಿಕ್ಕ ಪದಾರ್ಥಗಳು ಕಡಿಮೆ ಪ್ರಮಾಣ ದಿಂದ ಇರುತ್ತವೆ. ಮಿಠಾಯಿಗಾರರು ಮಾಡುವ ಖೋವೆಯ ಬಗ್ಗೆ ಸಾವಿತ್ರಿ ಹೇಳುತ್ತಿದ್ದಳಲ್ಲ! ಅದನ್ನು ಹ್ಯಾಗೆ ಮಾಡುವರೆಂಬದು ನಿಮಗೆ ಗೊತ್ತಿದೆಯೋ?

ರಂಗು—ಅಕ್ಕನವರೇ, ನನಗೆ ಗೊತ್ತಿರುವದು. ನಮ್ಮ ಮನೆಯ ಹತ್ತರ ಒಬ್ಬ ಮಿಠಾಯಿಗಾರನಿದ್ದಾನೆ. ಅವನು ಹಾಲನ್ನೆಲ್ಲ ಒಂದು ಕಡಾಯಿಯಲ್ಲಿ ಸುರುವಿ ಅದನ್ನು ಕುದಿಸುತ್ತಾನೆ. ಕಡೆಗೆ ಉಳಿಯುವ ಮುದ್ದೆಯೇ ಖೋವೆಯೆನಿಸುವದು.

ಅ—ನೀನು ಹೇಳುವದು ನಿಜವು. ಹೀಗೆ ಹಾಲನ್ನೆಲ್ಲ ಕುದಿಸಿ ಮಾಡಿದ ಖೋವೆಯಲ್ಲಿ ಬೆಣ್ಣೆ, ಸಕ್ಕರೆ, ಉಪ್ಪು ಇವೆಲ್ಲ ಇರುತ್ತವೆ. ನೀರು ಮಾತ್ರ ಹಾರಿಹೋಗುವದು. ಸಾವಿತ್ರಿಯು ತನ್ನ ಸೋದರತ್ತೆಯ ಮನೆಯಲ್ಲಿ ಬೆಣ್ಣೆ ಮಾಡುವ ಕ್ರಮವನ್ನು ಬಣ್ಣಿಸಿದಳು. ಹಾಲಿನಲ್ಲಿ ಮಜ್ಜಿಗೆಯನ್ನಾಗಲಿ, ಅಥವಾ ಮೊಸರನ್ನಾಗಲಿ, ಇಲ್ಲವೆ ಬೇಕಾದ ಹುಳಿ ಯಿರುವ ಪದಾರ್ಥವನ್ನಾಗಲಿ ಬೆರಸಿದರೆ ಅದು ಹೆರುವದು. ನೀವು ಹಾಲಿನಲ್ಲಿ ನಿಂಬೆಯ ರಸವನ್ನು ಹಿಂಡಿ ಖೋವೆಯನ್ನು ಮಾಡಲಿಲ್ಲವೆ? ಹಾಲಿನಲ್ಲಿ ಹುಳಿ ಪದಾರ್ಥವನ್ನು ಬೆರಸುವದರಿಂದ ನೀರೂ ಖೋವೆಯೂ ಬೇರೆಯಾಗುವವು ಕೂಸು ಕಾರಿದ ಹಾಲಿನಲ್ಲಿ ಮೊಸರಿನ ಮುದ್ದೆಗಳು ಕಾಣುತ್ತವೆ. ಇದರ ಕಾರಣವೇನಿರಬಹುದು?

ಸ—ನನಗೆ ಗೊತ್ತಿಲ್ಲ

ಅ—ನಮ್ಮ ಅನ್ನಾಶಯದಲ್ಲಿ ಒಂದು ತರದ ಹುಳಿ ರಸವು ಬಹಳ ಹೊರಡುತ್ತದೆ. ನಾವು ಕುಡಿದ ಹಾಲು ಇದರೊಡನೆ ಮಿಶ್ರವಾಗಿ ಮೊಸ ರಾಗುತ್ತದೆ. ಮೊಸರು ಕಡೆದು ಬೆಣ್ಣೆ ತೆಗೆದು ಉಳಿದದ್ದಕ್ಕೆ ನಾವು

ಮಜ್ಜಿಗೆಯೆನ್ನುತ್ತೇವೆ. ಬೆಣ್ಣೆಯನ್ನೂ ಜೋನೆಯನ್ನೂ ತೆಗೆದು ಮಾಡಿದ ಮಜ್ಜಿಗೆಯು ನಾವು ಮಾಡುವ ಮಜ್ಜಿಗೆಗಿಂತ ಕಡಿಮೆ ತರದ್ದು. ಯಾಕಂದರೆ, ನಾವು ಮಾಡುವ ಮಜ್ಜಿಗೆಯಲ್ಲಿ ಬೆಣ್ಣೆಯೂ ಜೋನೆಯೂ ಇರುತ್ತವೆ. ಮಜ್ಜಿಗೆಯು ಹಿತಕರವಾದ ಆಹಾರವು. ಇದರಿಂದ ಎಲುವುಗಳು ಬಲಿಯುತ್ತವೆ. ಮಜ್ಜಿಗೆ ಕುಡಿದರೆ ಎಲುವು ಕೆಡುವನೆಂದು ನಮ್ಮ ಜನರು ಹೇಳುವದುಂಟು. ಇದು ಸುಳ್ಳು. ಬಹಳ ಹುಳಿಯೊಡೆದ ಮಜ್ಜಿಗೆಯು ಆರೋಗ್ಯಕ್ಕೆ ಚೆಲೋದಲ್ಲ. ಸವಿ ಮಜ್ಜಿಗೆಯು ಮೇಲಾದದ್ದು. ಇರಲಿ, ನಾವು ಬೆಣ್ಣೆಯನ್ನು ಏನು ಮಾಡುತ್ತೇವೆ?

ಸಾ—ಬೆಣ್ಣೆ ಕಾಸಿ ತುಪ್ಪ ಮಾಡುತ್ತೇವೆ. ತುಪ್ಪಕ್ಕಿಂತ ನನಗೆ ಬೆಣ್ಣೆ ಹೆಚ್ಚು ಸೇರುತ್ತದೆ.

ಅ—ಅದೇ ತೆಗೆದ ಬೆಣ್ಣೆಗೆ ರುಚಿ ಬಹಳ; ಆದರೆ ಬೆಣ್ಣೆಯು ಬಹಳ ದಿನ ತಡೆಯುವದಿಲ್ಲ. ಆದದರಿಂದ ಅದನ್ನು ಕಾಸಿ ತುಪ್ಪ ಮಾಡಬೇಕಾಗುವದು. ಬೆಣ್ಣೆಯನ್ನು ತೊಳೆದು ಅದರಲ್ಲಿ ಸ್ವಲ್ಪ ಉಪ್ಪು ಬೆರಸಿ ಸಣ್ಣ ಮುದ್ದೆಯನ್ನು ಮಾಡಿ ಮಜ್ಜಿಗೆಯ ಮೇಲೆ ತೇಲ ಬಿಟ್ಟಿದ್ದರೆ, ಮಜ್ಜಿಗೆಯು ಕೆಡುವದಿಲ್ಲ. ಅದಕ್ಕೆ ರುಚಿಯೂ ಬರುವದು.

---

### ೪೬ನೆಯ ಪಾಠ.

## ಬೆಲ್ಲವೂ, ಸಕ್ಕರೆಯೂ, ಕಲ್ಲಸಕ್ಕರೆಯೂ.

ಕಮಲಿ—ಸೀತೇ, ನೀನು ಆ ದಿವಸ ಹೇಳಿದ ಗಿಡಗಳ ಕಥೆಗಳಲ್ಲಿ ಬೆಲ್ಲ, ಸಕ್ಕರೆ, ಹಾಗೂ ಕಲ್ಲಸಕ್ಕರೆಗಳನ್ನು ತನ್ನಿಂದ ಮಾಡುತ್ತಾರೆಂದು ಕಬ್ಬಿನ ಗಿಡವು ಹೇಳಿತು. ಸವಿ ಇರುವ ಎಲ್ಲ ಪದಾರ್ಥಗಳಿಂದ ಇವು ಆಗುತ್ತವೆಂದು ತುಂಗಿಯು ಹೇಳಿದಳು. ಮೊನ್ನೆ ಕಬ್ಬಿನ ತೋಟಕ್ಕೆ ಹೋದಾಗ ಕಬ್ಬಿನಿಂದ ಕಾಕಂಬಿಯನ್ನು ಹೇಗೆ ಮಾಡುತ್ತಾರೆಂಬದನ್ನು ನಾವು ನೋಡಿದೆವು. ಹಾಲು ತೆಗೆಯುವದಕ್ಕೋಸ್ಕರ ಕಬ್ಬುಗಳನ್ನು

ಗಾಣದಲ್ಲಿ ಹಾಕಿ ಗಾಣವನ್ನು ತಿರುಗಿಸಿದರು. ಕಬ್ಬಿನಿಂದ ಹಾಲು ಹೊರ ಹೊರಟಿತು. ಈ ಹಾಲನ್ನು ಒಂದು ದೊಡ್ಡ ಕೊಪ್ಪರಿಗೆಯಲ್ಲಿ ಕುದಿಸಲು ಅದು ಬೆಲ್ಲವಾಯಿತು. ಆದರೆ ಕಬ್ಬಿನಿಂದ ಸಕ್ಕರೆಯನ್ನೂ ಕಲ್ಲಸಕ್ಕರೆಯನ್ನೂ ಹೇಗೆ ಮಾಡುತ್ತಾರೆ? ಸಕ್ಕರೆಯನ್ನು ಬೇರೆ ಯಾವ ಪದಾರ್ಥದಿಂದ ಮಾಡುತ್ತಾರೆ?

ಸೀತೆ—ತಂಗೀ, ನಾನು ಹೇಳಿದ್ದೆಲ್ಲಾ ನೀನು ನೆನಪಿನಲ್ಲಿಟ್ಟದ್ದನ್ನು ಕೇಳಿ ನನಗೆ ಬಹಳ ಆನಂದವಾಯಿತು. ನಮ್ಮ ದೇಶದಲ್ಲಿ ಕಬ್ಬಿನಿಂದ ಬೆಲ್ಲವನ್ನು ಮಾಡುವ ರೂಢಿಯುಂಟು; ಸಕ್ಕರೆಯನ್ನಾಗಲಿ ಕಲ್ಲಸಕ್ಕರೆಯನ್ನಾಗಲಿ ಹೆಚ್ಚಾಗಿ ಮಾಡುವದಿಲ್ಲ. ನಮ್ಮ ದೇಶದಲ್ಲಿ ಸಕ್ಕರೆ-ಕಲ್ಲಸಕ್ಕರೆಗಳಿಗಿಂತ ಬೆಲ್ಲವನ್ನೇ ಬಹಳ ಉಪಯೋಗಿಸುವರು. ಹಾಗೂ ಕಬ್ಬಿನಿಂದ ಸಕ್ಕರೆಯನ್ನೂ ಕಲ್ಲಸಕ್ಕರೆಯನ್ನೂ ಮಾಡುವದು ಬಹು ಜನರಿಗೆ ಗೊತ್ತಿಲ್ಲ. ಸಕ್ಕರೆ, ಕಲ್ಲಸಕ್ಕರೆ, ಬೆಲ್ಲ ಇವುಗಳಲ್ಲಿ ಬಹಳ ಭೇದವಿಲ್ಲ. ಬೆಲ್ಲವನ್ನು ಸ್ವಚ್ಛ ಮಾಡಿ ಸಕ್ಕರೆಯನ್ನೂ ಹೆಚ್ಚು ಸ್ವಚ್ಛ ಮಾಡಿ ಕಲ್ಲಸಕ್ಕರೆಯನ್ನೂ ಮಾಡಬಹುದು. ಕಬ್ಬಿನ ಹಾಲನ್ನು ಒಂದು ಕೊಪ್ಪರಿಗೆಯಲ್ಲಿ ಹಾಕಿ ಕುದಿಸಲು ಕೊಪ್ಪರಿಗೆಯ ಬುಡದಲ್ಲಿ ಕೂಡುವ ಕಣವೇ ಸಕ್ಕರೆಯು. ಮೇಲ್ತರದ ಬೆಲ್ಲದ ರಸವು ಗಟ್ಟಿಯಾದ ಬಳಿಕ ಹೊರಭಾಗದಲ್ಲಿ ಸಕ್ಕರೆಯು ಕಾಣುವದು. ಕಬ್ಬಿನ ಹಾಲನ್ನು ಕುದಿಸಿದ ಬಳಿಕ ಅದರೊಳಗಿನ ಕಸವನ್ನು ತೆಗೆದುಬಿಡಬೇಕಾಗುವದು. ಬೆಲ್ಲವು ಒಳ್ಳೆಯದಾಗುವದೂ ಸಾಧಾರಣವಾದದ್ದಾಗುವದೂ ಕಬ್ಬಿನ ಜಾತಿಯನ್ನೂ ಅದನ್ನು ಮಾಡುವ ಪ್ರಕಾರವನ್ನೂ ಅವಲಂಬಿಸಿರುವದು. ಹಾನಗಲ್ಲು, ಶಿಕಾರಪುರ, ಕೊಲ್ಹಾಪುರ, ನಿಪ್ಪಾಣಿ, ಹಾಗೂ ಹುಕ್ಕೇರಿ ಈ ಸ್ಥಳಗಳಲ್ಲಾಗುವ ಬೆಲ್ಲವು ಮೇಲಾದದ್ದಿರುವದು. ಕಪ್ಪಾಗಿಯೂ ಜಿಗುಟಾಗಿಯೂ ಇರುವ ಬೆಲ್ಲವು ಕಡಿಮೆತರದ್ದೆಂದು ಎಣಿಸಲ್ಪಡುತ್ತದೆ. ಬಿಳಿದಾಗಲಿ ಕೆಂಪಗಾಗಲಿ ಇದ್ದು ಜಿಗುಟಿಲ್ಲದೆ ಕಣಕಣವಾಗಿರುವ ಬೆಲ್ಲವು ಮೇಲಾದದ್ದೆನಿಸುವದು.

ಕ—ಜಿಗುಟಿಲ್ಲದೆ ಕಣಕಣವಾಗಿರುವ ಬೆಲ್ಲವೆಂದರೇನು?

ಸೀ—ಜಿಗುಟಿಲ್ಲದ ಬೆಲ್ಲವನ್ನು ಕೈಯಲ್ಲಿ ತೆಗೆದುಕೊಂಡ ಕೂಡಲೆ ಅದು ಸುಲಭವಾಗಿ ಒಡೆಯುವದು. ಕಣಗಳು ಸವಿಯ ಸಾರದಿಂದಾಗುತ್ತವೆ. ಬೆಲ್ಲದಲ್ಲಿ ಕಣಗಳು ಹೆಚ್ಚಿದ್ದರೆ ಸಕ್ಕರೆಯು ಬಹಳ ಇದ್ದಂತಾಯಿತು. ಮದ್ರಾಸದಿಂದ ಬರುವ ಕರಿಯ ಬೆಲ್ಲವನ್ನು ನೋಡಿದರೆ ಹೇಸಿಕೆ ಬರುವದು. ಆದರೆ ಅಂಥ ಬೆಲ್ಲದಿಂದಲೂ ಸಕ್ಕರೆಯನ್ನು ಮಾಡುವರು.

ಕ—ಕಬ್ಬಿನ ಹಾಲಿನಿಂದ ಸಕ್ಕರೆಯನ್ನು ಮಾಡುತ್ತಾರೆಂದು ಕೇಳಿದ್ದೆ; ಬೆಲ್ಲದಿಂದ ಅದನ್ನು ಹ್ಯಾಗೆ ಮಾಡುವರು?

ಸೀ—ಕಬ್ಬಿನ ಹಾಲನ್ನು ಸ್ವಚ್ಛ ಮಾಡುವಂತೆ ಬೆಲ್ಲವನ್ನು ಸ್ವಚ್ಛ ಮಾಡುವರು; ಅದು ಸಕ್ಕರೆಯಾಗುವದು. ಬೆಲ್ಲವನ್ನು ಕರಗಿಸಿ ಕುದಿಸುತ್ತಾರೆ; ಅದು ಕುದಿಯುತ್ತಿರುವಾಗ ಅದರೊಳಗಿನ ಕಸವನ್ನೆಲ್ಲ ಬೇರೆ ಮಾಡುವದಕ್ಕೋಸ್ಕರ ಅದರೊಳಗೆ ಕೆಲವು ಪದಾರ್ಥಗಳನ್ನು ಚೆಲ್ಲುತ್ತಾರೆ.

ಕ—ಮತ್ತೆ ಯಾತರಿಂದ ಸಕ್ಕರೆಯನ್ನು ಮಾಡುತ್ತಾರೆ?

ಸೀ—ಜೋಳದ ದಂಟಿನಿಂದ ಸಕ್ಕರೆಯನ್ನು ಮಾಡುತ್ತಾರೆಂದು ತುಂಗಿಯು ಹೇಳಿದ್ದು ನಿಜವು. ಆದರೆ ಕಬ್ಬಿನಿಂದ ಮಾಡುವಷ್ಟು ಸಕ್ಕರೆಯನ್ನು ಇವುಗಳಿಂದ ಮಾಡುವದಿಲ್ಲ. ಇಂಗ್ಲಂಡದಲ್ಲಿಯೂ ಯುರೋಪಖಂಡದಲ್ಲಿಯೂ ಒಂದು ತರದ ಗಿಡಗಳ ಬೇರಿನಿಂದ ಸಕ್ಕರೆಯನ್ನು ಮಾಡುತ್ತಾರೆ. ಮೊನ್ನೆ ನಾವು ಪಲ್ಲೆಗೆಂದು ತಂದ ಯುರೋಪದ ಕೆಂಪು ಬೇರುಗಳಿಗೆ 'ಬೀಟ' ಎನ್ನುವರು. ಬೀಟದಿಂದ ಬಹಳ ಸಕ್ಕರೆಯು ಹೊರಡುವದು. ಸಕ್ಕರೆಯು ಹೆಚ್ಚುಹೆಚ್ಚು ಬೆಳ್ಳಗೂ ಹೊಳಪಾಗಿಯೂ ಕಣಗಳುಳ್ಳದ್ದೂ ಇರುವಂತೆ ಮೇಲಾದದ್ದೆನಿಸುವದು. ತರತರದ ಸಕ್ಕರೆಗಳಲ್ಲಿ ಮುದ್ದೆಯಾಗಿರುವ ಬಂಗಾಲದ ಸಕ್ಕರೆಯು ನಮ್ಮ ಜನರಿಗೆ ಹೆಚ್ಚು ಸೇರುತ್ತದೆ. ತಿಳುವಾದ ಪದರುಗಳುಳ್ಳ ಕಲ್ಲಸಕ್ಕರೆಯು ಮೇಲಾದದ್ದು.

## ೪೭ನೆಯ ಪಾಠ.

# ಬತ್ತದ ಜಾತಿಗಳು.

ಅಕ್ಕನವರು—ಪ್ರೀತಿಯ ಮಕ್ಕಳಿರಾ! ಅನ್ನವನ್ನು ಯಾತರಿಂದ ಮಾಡುತ್ತಾರೆ?

ಸುಂದರಿ—ಅಕ್ಕಿಯಿಂದ ಮಾಡುತ್ತಾರೆ.

ಅ—ಕುದಿಸಿದ ಅಕ್ಕಿಗೆ ಅನ್ನವೆಂದು ಅನ್ನುತ್ತೇವೆ. ಒಳ್ಳೆಯ ಉತ್ತಮ ಜಾತಿಯ ಅಕ್ಕಿಗೆ "ಅಂಬೇಮೊಹರ" ಎಂದೆನ್ನುತ್ತೇವೆ. ಈ ಜಾತಿಯ ಬತ್ತವ ಮೇಲೆ ತಗ್ಗು ಇರುತ್ತದೆ. ಅದು ಗಿಡ್ಡ ಇದ್ದು ತುಂಬಿದ್ದಿರುತ್ತದೆ. ಈ ಅಕ್ಕಿಯ ಕಾಳು ಬೆಳ್ಳಗಿದ್ದು ಮಿದುವಿರುತ್ತದೆ. ಈ ಅಕ್ಕಿಯನ್ನು ಕುದಿಸಿದರೆ ಮೆತ್ತನ್ನ ರುಚಿಕರ ಅನ್ನವು ಆಗುತ್ತದೆ. ಅದರಿಂದ ಒಳ್ಳೆಯ ಸುವಾಸನೆಯು ಹೊರಡುತ್ತದೆ. ಇದೊಂದು ಎರಡನೆಯ ಜಾತಿಯ ಅಕ್ಕಿಯು. ಇದಕ್ಕೆ ಕಾಗೆಸಾಳಿ (ಕರಿಯ ತೌಡಿನ ಅಂಬೇಮೊಹರ) ಎಂದೆನ್ನುತ್ತಾರೆ. ಇದರ ಅನ್ನವಾದರೂ ಉಣ್ಣಲಿಕ್ಕೆ ಬಹಳ ರುಚಿಕರ ಇರುತ್ತದೆ. ಇವುಗಳಲ್ಲದೆ ಮತ್ತೆ ಎರಡು ಜಾತಿಯ ಅಕ್ಕಿಯನ್ನು ನೋಡಿರಿ. ಇವಾದರೂ ಅಂಬೇಮೊಹರ ಮತ್ತು ಕಾಗೆಸಾಳಿಯಂತೆ ಚೆಲೋ ಇರುತ್ತವೆ. ಸುಂದರವ್ವಾ, ಇವುಗಳನ್ನು ವರ್ಣಿಸು, ನೋಡುವಾ.

ಸುಂ—ಒಂದು ಜಾತಿಯ ಅಕ್ಕಿಯ ತೌಡು ಸ್ವಲ್ಪ ಕೆಂಪಗಿದ್ದು ಅದರ ಕಾಳುಗಳು ಅಂಬೇಮೊಹರಿನ ಕಾಳುಗಳಿಗಿಂತ ಉದ್ದ ಇರುತ್ತವೆ. ಎರಡನೆಯ ಜಾತಿಯ ಅಕ್ಕಿಯ ತೌಡು ಅಂಬೇಮೊಹರಿನಂತೆ ಹಳದಿ ಇದ್ದು, ಕಾಳುಗಳು ಮಾತ್ರ ಸ್ವಲ್ಪ ದುಂಡಗಿರುತ್ತವೆ.

ಅ—ಪ್ರೀತಿಯ ಮಗಳೇ ಹೌದು, ಕೆಂಪು ತೌಡಿದ್ದ ಬತ್ತಕ್ಕೆ ಕುಂಕುಮಸಾಳಿ ಎಂದೆನ್ನುತ್ತಾರೆ. "ಸಾಳಿ"ಯೆಂದರೆ ಬತ್ತ. ಆವದರಿಂದ ಕುಂಕುಮಸಾಳಿಯೆಂದರೆ ಕುಂಕುಮದಂತೆ ಕೆಂಪು ತೌಡಿದ್ದ ಬತ್ತವು. ಎರಡನೆಯ ಜಾತಿಯ ಬತ್ತಕ್ಕೆ "ಬದನಿಸಾಳಿ"ಯೆಂದೆನ್ನುತ್ತಾರೆ. ಅದು

ಮಲೆನಾಡಿನಲ್ಲಿ ಬೆಳೆಯುತ್ತದೆ. ಇವೆರಡು ಜಾತಿಯ ಅಕ್ಕಿಯನ್ನು ಕುದಿಸುವಾಗ ಅಂಬೇಮೊಹರಿನಂತೆ ಸುವಾಸನೆಯು ಹೊರಡುತ್ತದೆ. ಮತ್ತೆ "ಅಂತರಸಾಳಿ," "ದೊಡ್ಡಿಗನ ಬತ್ತ," ಈ ಬತ್ತದ ಜಾತಿಗಳನ್ನು ನೋಡಿರಿ. ತಂಗೀ! ನಿಮ್ಮ ಮನೆಯಲ್ಲಿ ದಿನಾಲು ಯಾವ ಅನ್ನವನ್ನು ಮಾಡುತ್ತಾರೆ?

ಸುಂ—ನಮ್ಮಲ್ಲಿ ದಿನಾಲು "ಜೀರಿಗೆಸಾಳಿ"ಯ ಅಕ್ಕಿಯನ್ನು ಕುದಿಸುತ್ತಾರೆ; ಮತ್ತು ಹಬ್ಬಹುಣ್ಣಿವೆಯ ದಿವಸ ಅಂಬೇಮೊಹರಿನ ಅನ್ನವನ್ನು ಮಾಡುತ್ತಾರೆ.

ಅ—ಶಾಬಾಸು! ಜೀರಿಗೆಸಾಳಿಯ ಅಕ್ಕಿಯನ್ನು ಮತ್ತೆ ಯಾರಾದರೂ ಬಲ್ಲಿರೋ?

ಕೃಷ್ಣಿ—ಅಹುದು, ಅಕ್ಕನವರೇ, ಜೀರಿಗೆಸಾಳಿಯ ಕಾಳುಗಳು ಬಹಳ ತೆಳ್ಳಗೆ ಇರುತ್ತವೆ.

ಅ—ನೀನು ಹೇಳಿದ್ದು ಸರಿ. ಜೀರಿಗೆಯಂತೆ ಅವರ ಕಾಳುಗಳು ಸಣ್ಣವಿರುವದರಿಂದಲೇ ಅದಕ್ಕೆ ಜೀರಿಗೆಸಾಳಿ ಎಂದು ಹೆಸರು ಬಂದದೆ. ಈ ಜಾತಿಯ ಅಕ್ಕಿಗೆ ವಾಸನೆಯು ಇರುವದಿಲ್ಲ; ಆದರೆ ಕಾಳುಗಳು ನೋಡಲಿಕ್ಕೆ ಚಂದವಿರುತ್ತವೆ. ಅದು ಮಲೆನಾಡಿನಲ್ಲಿ ಬೆಳೆಯುತ್ತದೆ. ಬಡಬಗ್ಗರು ಉಪಯೋಗಿಸುವ ಅಕ್ಕಿಯು ಯಾವದು?

ಕೃ—ದೊಡ್ಡ ಬತ್ತವೆಂಬ ಜಾತಿಯನ್ನು ಉಪಯೋಗಿಸುತ್ತಾರೆ.

ಅ—ಇಲ್ಲಿ ದೊಡ್ಡ ಬತ್ತವೂ ಅವರ ಅಕ್ಕಿಯೂ ಇರುತ್ತವೆ. ಇವನ್ನು ನೋಡಿರಿ. ಈ ಅಕ್ಕಿಯ ಕಾಳುಗಳು ಸ್ವಲ್ಪ ಗಡುತರವಾಗಿ ಕೆಂಪು ಮೂಡಿಯ ಮೇಲೆ ಅವೆ. ಈ ಅಕ್ಕಿಯ ಅನ್ನ ರುಚಿಯಲ್ಲ. ಆದರೆ ಇದು ಅಗ್ಗವಿರುವದರಿಂದ ಬಡಬಗ್ಗರು ಕೊಳ್ಳುವ ಅಕ್ಕಿಯಾಗಿದೆ. ಬತ್ತದ ಮತ್ತೊಂದು ಜಾತಿಯು ನಿನಗೆ ಗೊತ್ತಿದೆಯೋ?

ಸುಂ—ಇಲ್ಲ ಅಕ್ಕನವರೇ.

ಅ—ಪ್ರೀತಿಯ ಮಗುವೇ! ಈ ಜಾತಿಯ ಅಕ್ಕಿಯನ್ನು ನೋಡಿ ಲ್ಲವೇ?

ಸುಂ—ಹೌದು, ಅಕ್ಕನವರೇ! ನೋಡಿದ್ದೇನೆ. ಅದಕ್ಕೆ ನಾವು ಕಿಚಡಿಯ ಅಕ್ಕಿ ಎನ್ನುತ್ತೇವೆ.

ಅ—ಸರಿ, ಈ ಜಾತಿಯ ಅಕ್ಕಿಯ ಕಿಚಡಿಯು ಬಹಳ ರುಚಿಕರವಿರುತ್ತದೆ. ಈ ಜಾತಿಯ ಬತ್ತವು ಮಲೆನಾಡಿನಲ್ಲಿಯೂ ಕೊಂಕಣದಲ್ಲಿಯೂ ಬೆಳೆಯುತ್ತದೆ. ನೋಡು, ಈ ಜಾತಿಯ ಅಕ್ಕಿಯು ದುಂಡಗಿರುತ್ತದೆ. ಈ ಜಾತಿಯ ಬತ್ತವನ್ನು ಹುರಿದು ಕುಟ್ಟಿದರೆ, ಅದರ ಅನ್ನವು ಬಹಳೇ ಚೆಲೋ ಆಗುತ್ತದೆ. ಕೆಲವರು ಬತ್ತದಲ್ಲಿ ಅರುವತ್ತು ಜಾತಿಗಳು ಇರುತ್ತವೆಂತಲೂ ಹಲವರು ಎಂಬತ್ತೈದು ಜಾತಿಗಳಿರುತ್ತವೆಂತಲೂ ಅನ್ನುತ್ತಾರೆ. ಬತ್ತದಲ್ಲಿ ಜಾತಿಗಳು ಬಹಳ. ಬತ್ತವು ಚೆಲೋ ಜಾತಿಯದಿದ್ದಂತೆ ಅದಕ್ಕೆ ಹೆಚ್ಚು ನೀರು ಬೇಕಾಗುತ್ತದೆ. ಉತ್ತಮ ಜಾತಿಯ ಅಕ್ಕಿಯ ಅನ್ನವು ಬಹಳ ರುಚಿಕರವಿರುತ್ತದೆ. ಆದರೆ ಅದು ಸುಲಭವಾಗಿ ಪಚನವಾಗುವದಿಲ್ಲ.

---

## ೪೮ನೆಯ ಪಾಠ.

## ಹಿಟ್ಟು.

ಅಕ್ಕನವರು—ನಿನ್ನಿನ ದಿವಸ ಬತ್ತದ ಜಾತಿಗಳ ಸಂಬಂಧದಿಂದ ಮಾತಾಡಿದೆವು. ಕೋಟ್ಯವಧಿ ಜನರು ಅಕ್ಕಿಯನ್ನು ತಿಂದು ಬದುಕುತ್ತಾರೆ. ಕೆಲವು ದೇಶಗಳಲ್ಲಿಯಂತೂ ಜನರು ಬರೇ ಅಕ್ಕಿಯಿಂದಲೇ ಉಪಜೀವಿಸುತ್ತಾರೆ. ಕರ್ನಾಟಕದಲ್ಲಿಯಾದರೂ ಎಷ್ಟೋ ಜನರು ಬರೇ ಅಕ್ಕಿ ಮತ್ತು ಜೋಳದಿಂದ ಉಪಜೀವನ ಮಾಡುತ್ತಾರೆ. ನಾವು ಅನ್ನದ ಕೂಡ ಬಕ್ಕರಿಯನ್ನು ಅಥವಾ ಕಡಬುಗಳನ್ನು ತಿನ್ನುತ್ತೇವೆ. ಬಕ್ಕರಿಯನ್ನು ಯಾತರಿಂದ ಮಾಡುತ್ತಾರೆ?

ಗೌರಿ—ಗೋದಿಯ ರೊಟ್ಟಿಗಳು ಸಣ್ಣವಿರುತ್ತವೆ. ಮತ್ತು ಸೆಜ್ಜೆಯ ಅಥವಾ ಜೋಳದ ರೊಟ್ಟಿಗಳು ದೊಡ್ಡವಿರುತ್ತವೆ.

ಯಮುನೆ—ನಮ್ಮ ಕಡೆಗೆ ಅಕ್ಕಿಯ ಬಕ್ಕರಿಗಳನ್ನಾದರೂ ಮಾಡುತ್ತಾರೆ.

ಅ—ಹೌದು, ಸೆಜ್ಜೆ-ಜೋಳಗಳಿಂದ ಬಕ್ಕರಿಗಳನ್ನು ಮಾಡುವಂತೆ ಗೋದಿ, ಗೋವಿನಜೋಳ, ಅಕ್ಕಿ, ರಾಜಗಿರಿಗಳಿಂದಾದರೂ ಬಕ್ಕರಿ ಮಾಡುತ್ತಾರೆ. ಗೋವಿನಜೋಳದ ಬಕ್ಕರಿಗಳನ್ನು ಚಿಕ್ಕೋಡಿ ತಾಲೂಕಿನ ಜನರು ತಿನ್ನುತ್ತಾರೆ. ಗೋದಿ ಮತ್ತು ಸೆಜ್ಜೆಯ ಬಕ್ಕರಿಗಳಂತೆಯೇ ಗೋವಿನಜೋಳದ ಬಕ್ಕರಿಗಳನ್ನೂ ತಿನ್ನುತ್ತಾರೆ. ಜೋಳದ ಬಕ್ಕರಿಗಳನ್ನು ಬೆಳಗಾವಿ, ಧಾರವಾಡ, ವಿಜಾಪುರ ಜಿಲ್ಲೆಗಳಲ್ಲಿ ತಿನ್ನುತ್ತಾರೆ. ಬಡಬಗ್ಗರು ನವಣೆ, ರಾಗಿಗಳಿಂದ ಉಪಜೀವಿಸುತ್ತಾರೆ. ಬತ್ತವು ಮಾತ್ರ ಬೆಳೆಯುವಲ್ಲಿ ಅಕ್ಕಿಯ ಸಣ್ಣ ದೊಡ್ಡ ಬಕ್ಕರಿಗಳನ್ನು ಮಾಡುತ್ತಾರೆ.

ಗೌ—ಗೋದಿಯ ರೊಟ್ಟಿಗಳು ನನಗೆ ಬಹಳ ಸೇರುತ್ತವೆ.

ಅ—ಯಾಕಂದರೆ, ಗೋದಿಯು ಎಲ್ಲ ಧಾನ್ಯಗಳಲ್ಲಿ ಶ್ರೇಷ್ಠವಾದದ್ದು. ಅದು ರುಚಿಕರವೂ ಪೌಷ್ಟಿಕವೂ ಇರುತ್ತದೆ. ಗೋದಿಯ ಹಿಟ್ಟಿನ ರೊಟ್ಟಿಗಳನ್ನು ಬೇನೆ ಬಿದ್ದವರಿಗೆ ಯಾಕೆ ಕೊಡುವದಿಲ್ಲೆಂಬದು ನಿನಗೆ ಗೊತ್ತಿರುವದೋ ?

ಗೌ—ಯಾಕಂದರೆ, ಅವು ಸುಲಭವಾಗಿ ಪಚನವಾಗುವದಿಲ್ಲ.

ಅ—ಆಹುದು. ಅವು ಯಾಕೆ ಸುಲಭವಾಗಿ ಪಚನವಾಗುವದಿಲ್ಲವೆಂದರೆ, ಅವುಗಳಲ್ಲಿ ಸಾರಜನಕ ಪದಾರ್ಥವು ಹೆಚ್ಚು ಇರುವದು. ಗೋದಿಯ ಜಿನುಗಾದ ಹಿಟ್ಟು ಬೇಕಾದರೆ ಅದನ್ನು ತೋಯಿಸಿ ಬೀಸುವರು. ಈ ಜಿನುಗಾದ ಗೋದಿಯ ಹಿಟ್ಟನ್ನು ನೋಡು, ಹ್ಯಾಗದೆ ?

ಗೌ—ಅದು ಬೆಳ್ಳಗೆ ಜಿಗುಟು ಇರುತ್ತದೆ.

ಅ—ಆಹುದು; ಯಾಕಂದರೆ, ಆ ಹಿಟ್ಟಿನಲ್ಲಿ ತೌಡಿನ ಹಿಟ್ಟು ಕೂಡಿರುವದಿಲ್ಲ. ಗೋದಿಯನ್ನು ಹಾಗೆಯೇ ಬೀಸಿದರೆ ಹಿಟ್ಟಿನಲ್ಲಿ ತೌಡಿನ ಹಿಟ್ಟಾದರೂ ಕೂಡುವದು. ಇಂಥ ಹಿಟ್ಟು ತೌಡಿಲ್ಲದ ಗೋದಿಯ ಹಿಟ್ಟಿಗಿಂತ ಸುಲಭವಾಗಿ ಪಚನವಾಗುವದು. ತೋಯಿಸಿದ ಗೋದಿಯ ಹಿಟ್ಟಿನಿಂದ ಸಜ್ಜಿಗೆಯನ್ನು ತೆಗೆಯುತ್ತಾರೆ. ಈ ಸಜ್ಜಿಗೆಯನ್ನು ನೋಡು. ಪುರಿಗಳನ್ನು ಮಾಡುವದಾದರೆ ಗೋದಿಯ ಹಿಟ್ಟಿನಲ್ಲಿ ಸ್ವಲ್ಪ ಸಜ್ಜಿಗೆಯನ್ನು ಕೂಡಿಸುತ್ತಾರೆ. ಸಜ್ಜಿಗೆಯನ್ನು ತುಪ್ಪದಲ್ಲಿ ಹುರಿದು ಸಕ್ಕರೆಯನ್ನು ಕೂಡಿಸಿ ಬೇಯಿಸಿದರೆ ತಿನ್ನುವಂಥ ಉತ್ತಮ ಸಜ್ಜಿಗೆಯು ಆಗುತ್ತದೆ. ಗೋದಿಯ ಜಾತಿಗಳು ಬಹಳ ಇರುತ್ತವೆ. ಆದರೆ ಕರ್ನಾಟಕ ಪ್ರಾಂತದ ಹೊಲಗಳಲ್ಲಿ ಒಂದೇ ಜಾತಿಯ ಗೋದಿಯು ಮಾತ್ರ ಬೆಳೆಯುತ್ತದೆ. ಅದರ ಹೆಸರೇನು?

ಗೌ—ಅದಕ್ಕೆ ಹೊಲದ ಗೋದಿ ಎನ್ನುತ್ತಾರೆ.

ಅ—ಅದು ಕೆಂಪು ಜಾತಿಯ ಗೋದಿಯು. ಕೆಂಪು ಜಾತಿಯ ಗೋದಿಗಿಂತ ಬಿಳೇ ಜಾತಿಯ ಗೋದಿಯಿಂದ ಮೇಲ್ತರದ ತಿನ್ನುವ ಪದಾರ್ಥಗಳಾಗುತ್ತವೆ. ಕೆಲವು ಗೋದಿಗಳಲ್ಲಿ ಸಾರಜನಕ ಪದಾರ್ಥವು ಹೆಚ್ಚು ಇರುವದು. ನಮ್ಮ ದೇಶೀಯ ಜನರಿಗೆ ಅವು ಬಹಳ ಸೇರುವಂತೆ ಇಂಗ್ಲಂಡದೊಳಗಿನ ಹಿಟ್ಟಿನ ಗಿರಣಿಯ ಯಜಮಾನರಿಗೆ ಮೆತ್ತನ್ನ ಬಿಳೇ ಜಾತಿಯ ಗೋದಿಗಳು ಬಹಳ ಬೇಕಾಗುತ್ತವೆ. ಆದದರಿಂದ ಅವು ಇಂಗ್ಲಂಡದೊಳಗೆ ಮಾರುವದು ಹೆಚ್ಚು. ಕರ್ನಾಟಕದ ಕೆಲವು ಭಾಗಗಳಲ್ಲಿ ಸದಕಿನ ಗೋದಿಯನ್ನು ನೀರು ಹಾಯಿಸಿ ಬೆಳೆಯಿಸುತ್ತಾರೆ. ಗೋವಿನಜೋಳ, ಸಜ್ಜೆ, ಜೋಳ ಇವು ಗೋದಿಗಿಂತ ಕಡಿಮೆ ಪೌಷ್ಟಿಕವಾದವುಗಳು. ಆದರೆ ಅವು ಉಳಿದ ಜಾತಿಯ ಕಾಳುಗಳಿಗಿಂತ ಹೆಚ್ಚು ಪೌಷ್ಟಿಕವಿರುತ್ತವೆ. ರಾಜಗಿರಿಯ ಬಕ್ಕರಿಗಳನ್ನು ಉಪವಾಸದ ದಿವಸ ಉಪಯೋಗಿಸುತ್ತಾರೆ. ಗೆಣಸು, ಬಾಳೇಕಾಯಿಗಳಿಂದಾದರೂ ಹಿಟ್ಟು

ಹೊರಡುತ್ತದೆ. ಇದಲ್ಲದೆ 'ಅರಾರೂಟ' ಎಂಬ ಬೇರಿನ ಹಿಟ್ಟೂ ಇರುವದು. ಇದನ್ನು ನೋಡು. ಬೇನೆ ಬಿದ್ದವರಿಗೂ ಕೂಸುಗಳಿಗೂ ಕೊಡುತ್ತಾರೆ.

ಯ—ಓಹೋ, ಈ ಹಿಟ್ಟಾದರೂ ಬಹಳ ಮೆತ್ತಗೂ ಬೆಳ್ಳಗೂ ಅದೆ.

ಅ—ಆದರೆ ಅದರಲ್ಲಿ ಗೋದಿಸಜ್ಜಿಗಳಷ್ಟು ಸಾರಜನಕ ಪದಾರ್ಥವು ಇರುವದಿಲ್ಲ.

---

### ೪೯ನೆಯ ಪಾಠ.

## ಕಾಯಿಪಲ್ಲೆ.

ಅಕ್ಕನವರು—ಮನುಷ್ಯನು ಎಂಥ ಸೋಜಿಗದ ಪ್ರಾಣಿಯು! ಗಿಡಗಳ ಬೇರು, ತೊಗಟೆ, ಟೊಂಗೆ, ಎಲೆ, ಹೂ, ಹಣ್ಣು ಇವೆಲ್ಲವನ್ನು ತಿನ್ನುತ್ತಾನೆ. ಅವನು ತಿನ್ನುವ ಕೆಲವು ಕಾಯಿಪಲ್ಲೆಗಳನ್ನು ಪಶುಗಳು ಮೂಸಿ ಸಹ ನೋಡುವದಿಲ್ಲ.

ಸಾವಿತ್ರಿ—ಅಕ್ಕನವರೇ, ಇದು ನಿಜವಿರಲಾರದು. ಮನುಷ್ಯನು ಎಲ್ಲ ಪ್ರಾಣಿಗಳಲ್ಲಿ ಶ್ರೇಷ್ಠನು, ಅಂದ ಮೇಲೆ ಪಶುಗಳು ಮೂಸಿ ಸಹ ನೋಡದ ಕಾಯಿಪಲ್ಲೆಯನ್ನು ಅವನು ಹ್ಯಾಗೆ ತಿಂದಾನು?

ಅ—ತಂಗೀ, ನಾನು ಹೇಳಿದ್ದು ಸುಳ್ಳಲ್ಲ. ಪಶುಗಳು ತಿನ್ನದ ಹಕ್ಕರಿಕೆಯ ಎಲೆಗಳನ್ನು ಮನುಷ್ಯನು ತಿನ್ನುತ್ತಾನೆ. ಯಾವ ಪಶುವೂ ತಿನ್ನದ ಹಾಗಲಕಾಯಿಯನ್ನು ಮನುಷ್ಯನು ಸಂತೋಷದಿಂದ ಸವಿಯುತ್ತಾನೆ.

ಸರಸ್ವತಿ—ಹಕ್ಕರಿಕೆಯ ಸೊಪ್ಪನ್ನು ಬಡ ಜನರು ತಿನ್ನುತ್ತಾರೆ. ಹಾಗಲಕಾಯಿಗೆ ಒಳ್ಳೆಯ ರುಚಿ ಇರುವದರಿಂದ ಅದರ ಪಲ್ಲೆ ಮಾಡಿ ನಾವು ತಿನ್ನುತ್ತೇವೆ.

ಅ—ಶ್ರೀಮಂತರಾದರೂ ಹಕ್ಕರಿಕೆಯ ಸೊಪ್ಪನ್ನು ತಿನ್ನುವರು. ಹಾಗಲಕಾಯಿಯು ಬಹಳ ಕಹಿ ಇರುವದರಿಂದ ಅವನ್ನು ಒಂದನ್ನೇ

ಬೇರೆಯಾಗಿ ತಿನ್ನುವದಾಗುವದಿಲ್ಲ. ಆವರೆ, ಬಕ್ಕರಿಗೆ ಬಾಡಿಸಿಕೊಂಡರೆ ಅವಕ್ಕೆ ಬಹಳ ರುಚಿ ಬರುವದು.

ಕಮಲೆ—ಅಕ್ಕನವರೇ, ಮನುಷ್ಯರು ಗಿಡಗಳ ಬೇರು, ತೊಗಟೆ, ಟೊಂಗೆ, ಎಲೆ, ಹೂ, ಹಣ್ಣು ಇವೆಲ್ಲವನ್ನು ತಿನ್ನುವರು ಎಂದಿರಲ್ಲವೇ? ಅದು ಹ್ಯಾಗೆ?

ಅ—ಸೂರಣ, ಗೆಣಸು, ಬಟಾಟೆ ಇವೆಲ್ಲ ಬೇರುಗಳು; ಮೂಲಂಗಿ, ಗಜ್ಜರಿ ಇವಾದರೂ ಬೇರುಗಳೇ. ಅವರೆಕಾಯಿ, ಚವಳಿಕಾಯಿಗಳನ್ನು ನಾವು ಸಿಪ್ಪೆಗೂಡ ತಿನ್ನುತ್ತೇವೆ. ಮಸಾಲೆಯಲ್ಲಿ ಹಾಕುವ ದಾಲಚಿನ್ನಿಯು ಒಂದು ಗಿಡದ ತೊಗಟೆಯು. ನಾವು ಶಾವಿ, ಮೆಂತೆ ಮೊದಲಾದ ಸೊಪ್ಪುಗಳನ್ನು ಸಣ್ಣ ಸಣ್ಣ ಟೊಂಗೆ ಸಹಿತ ಪಲ್ಲೆ ಮಾಡುತ್ತೇವೆ. ಪಲ್ಲೆ ಮಾಡುವ ಸೊಪ್ಪುಗಳು ಒಂದಿಲ್ಲೊಂದು ಗಿಡದ ಎಲೆಗಳಿರುತ್ತವೆ. ನಾವು ಚೊಗಚಿ, ನುಗ್ಗಿ, ಕುಂಬಳ ಮುಂತಾದವುಗಳ ಹೂಗಳನ್ನು ತಿನ್ನುತ್ತೇವೆ. ನಾವು ಕಾಯಿಪಲ್ಲೆಯಲ್ಲಿ ಹಾಕುವ ತೊಗರಿ, ಬಟಗಡಲೆ ಮೊದಲಾದ ಹಸಿಕಾಳುಗಳು ಗಿಡಗಳ ಕಾಯಿಗಳಿರುತ್ತವೆ. ಮಾವು, ಪೇರಲ, ಕಿತ್ತಳೆ ಮೊದಲಾದವುಗಳನ್ನು ನಾವು ಹಾಗೆಯೇ ತಿನ್ನುತ್ತೇವೆ. ಇರಲಿ, ನಾವು ಪಲ್ಲೆಯನ್ನು ಯಾಕೆ ತಿನ್ನುತ್ತೇವೆ?

ಸಾ—ಪಲ್ಲೆಯಿಲ್ಲದೆ ಬರೇ ಬಕ್ಕರಿಯನ್ನು ಹ್ಯಾಗೆ ತಿನ್ನಬೇಕು?

ಅ—ಯಾಕೆ? ತೊವ್ವೆ ಬಾಡಿಸಿಕೊಂಡು ಬಕ್ಕರಿ ತಿನ್ನುವದಾಗುವದಿಲ್ಲೇನು?

ಸಾ—ತೊವ್ವೆ, ಅನ್ನ, ಬಕ್ಕರಿಗಳಿದ್ದರೂ ಪಲ್ಲೆಯು ಬೇಕೆನಿಸುತ್ತದೆ.

ಅ—ಪಲ್ಲೆಯಿಂದ ಊಟಕ್ಕೆ ರುಚಿ ಬರುವದು. ಅದೇ ಕೊಯಿದ ಪಲ್ಲೆಯು ಆರೋಗ್ಯಕ್ಕೆ ಒಳ್ಳೆಯದು. ಪಲ್ಲೆ ತಿನ್ನದವನ ಮೈಯಲ್ಲಿ ಕಸುವು ಇರುವದಿಲ್ಲ.

ಸಾ—ಬಡವರು ಕಾಯಿಪಲ್ಲೆಯನ್ನು ಎಲ್ಲಿ ತಿನ್ನುತ್ತಾರೆ?

ಅ—ಬಡವರಿಗೆ ದಿನಾಲು ಕಾಯಿಪಲ್ಲೆ ಸಿಗುವದಿಲ್ಲ. ಸಿಕ್ಕಾಗ ಅವರು ಬಹಳ ತಿನ್ನುವರು. ಬಹುತರವಾಗಿ ಅವರು ಹಸಿ ಗಡ್ಡೆಗೆಣಸು ಗಳನ್ನೂ, ಬೇಳೆ ಉಳ್ಳೇಗಡ್ಡೆಗಳನ್ನೂ ಬಹಳ ತಿನ್ನುತ್ತಾರೆ. ತೀರ ಬಡವ ರಿರುವದರಿಂದ ಇವುಗಳಲ್ಲಿ ಒಂದನ್ನಾದರೂ ತಿನ್ನದೆ ಬದುಕಬೇಕಾಗು ವವರ ಮೈಯಲ್ಲಿ ಕಸುವು ಇರುವದಿಲ್ಲ. ನಮ್ಮ ಶರೀರದ ಬೆಳವಣಿಗೆಗೆ ಬೇಕಾಗುವ ಎಲ್ಲ ಬಗೆಯ ಪದಾರ್ಥಗಳು ಬರೇ ಕಾಳುಗಳನ್ನು ತಿನ್ನುವ ದರಿಂದ ದೊರೆಯುವದಿಲ್ಲ. ಕಾಯಿಪಲ್ಲೆಯಿಂದ ನಮ್ಮ ದೇಹಕ್ಕೆ ಕ್ಷಾರ ಗಳೂ ಆಮ್ಲಗಳೂ ಸಿಗುತ್ತವೆ. ಕಾಯಿಪಲ್ಲೆಗಳೂ ಅವುಗಳಲ್ಲಿ ಹಾಕುವ ಮಸಾಲೆಯ ಸಾಮಾನುಗಳೂ ಲಾಲಾರಸವನ್ನೂ ಹೆಚ್ಚಿಸಿ ಪಚನಕ್ರಿಯೆಗೆ ನೆರವಾಗುತ್ತವೆ. ಇಷ್ಟೇ ಅಲ್ಲ; ಅನ್ನ, ಬಕ್ಕರಿ ಮೊದಲಾದವುಗಳಿಂದ ದೊರೆಯುವ ಪದಾರ್ಥಗಳೂ ಕಾಯಿಪಲ್ಲೆಗಳಲ್ಲಿ ಬಹಳ ಇರುತ್ತವೆ.

ಸ—ಈ ಪದಾರ್ಥಗಳು ಯಾವವು?

ಅ—ಆಹಾರದ ಘಟಕಗಳನ್ನೂ ನಮ್ಮ ಶರೀರಕ್ಕೆ ಬೇಕಾಗಿರುವ ದ್ರವ್ಯಗಳನ್ನೂ ಮುಂದೆ ತಿಳಿಸಿಕೊಡುವೆನು. ಅಕ್ಕಿ, ಗೋದಿಯ ಹಿಟ್ಟು ಇವುಗಳಿಂದ ದೊರೆಯುವ ದ್ರವ್ಯಗಳೇ ಬೇರು (ಗಡ್ಡೆ-ಗೆಣಸು) ಗಳಿಂದ ದೊರೆಯುತ್ತವೆಂಬುದು ತಿಳಿದರೆ ಈಗ ಸಾಕು. ತರತರದ ಬೇಳೆಗಳಿಂದ ಶರೀರಕ್ಕೆ ದೊರೆಯುವ ಪೌಷ್ಟಿಕ ಪದಾರ್ಥವು ಕಾಯಿಗಳ ಬೀಜಗಳಿಂ ದಲೂ ದೊರೆಯುವದು. ನಾವು ತಿನ್ನುವ ಕಾಯಿಗಳು ಬಹುತರ ಬೇಳೆಯ ಜಾತಿಯವೇ ಇರುತ್ತವೆ. ಒಣ ಬಟಾಣಿ, ಹಾಗು ಒಣ ಚೆನ್ನಂಗಿಯ ಕಾಳುಗಳಿಗಿಂತ ಹಸಿ ಬಟಾಣಿಯೂ ಹಸಿ ಚೆನ್ನಂಗಿಯ ಕಾಳುಗಳೂ ಹೆಚ್ಚು ರುಚಿಯಾದವೂ ಆರೋಗ್ಯಕರವಾದವೂ ಇರುತ್ತವೆ.

## ೫೦ನೆಯ ಪಾಠ.

# ಅಡಿಗೆಯ ಪ್ರಕಾರಗಳು.

ಅಕ್ಕನವರು—ಮಕ್ಕಳಿರಾ, ಆಹಾರವನ್ನು ಅಡಿಗೆ ಮಾಡಿ ತಿನ್ನುವ ಕಾರಣವೇನು? ಅಡಿಗೆ ಮಾಡದೆ ತಿಂದರೆ ಏನು ಕೇಡಾಗುವದು?

ಸಾವಿತ್ರಿ—ಹಸಿ ಆಹಾರವನ್ನು ತಿಂದರೆ ಹೊಟ್ಟೆಶೂಲಿಯು ಏಳುವದು.

ಅ—ಅಡಿಗೆ ಮಾಡದ ಆಹಾರವು ಅಟ್ಟ ಆಹಾರದಷ್ಟು ಸುಲಭವಾಗಿ ಪಚನವಾಗುವದಿಲ್ಲ. ಮನುಷ್ಯನ ಹೊರತು ಇತರ ಯಾವ ಪ್ರಾಣಿಗಾದರೂ ಅಡಿಗೆ ಮಾಡುವದು ಗೊತ್ತಿರುವದೇನು?

ಕಮಲೆ—ಅಕ್ಕನವರೇ, ಯಾವವೂ ಇಲ್ಲ; ಇತರ ಎಲ್ಲ ಪ್ರಾಣಿಗಳು ಹಸಿ ಪದಾರ್ಥಗಳನ್ನೇ ತಿನ್ನುತ್ತವೆ.

ಅ—ದೇವರು ಅವುಗಳ ಹೊಟ್ಟೆಗೆ ಹಸಿ ಪದಾರ್ಥಗಳನ್ನು ಪಚನ ಮಾಡಿಕೊಳ್ಳುವ ಶಕ್ತಿಯನ್ನು ಕೊಟ್ಟಿರುವನು. ಪುರಾತನ ಕಾಲದಲ್ಲಿ ಮನುಷ್ಯನಾದರೂ ಹಸಿ ಅನ್ನವನ್ನೇ ಉಣ್ಣುತ್ತಿದ್ದನು. ಆಗ ಅವನಿಗೆ ಅದನ್ನು ಜೀರ್ಣಿಸಿಕೊಳ್ಳುವ ಶಕ್ತಿಯು ರೂಢಿಯಾಗಿತ್ತು. ಸುಮಾರು ೪೦೦ ವರ್ಷಗಳ ಹಿಂದೆ ಅಮೇರಿಕ ಖಂಡವನ್ನು ಗೊತ್ತುಹಚ್ಚಿದರು. ಆಗ ಅಲ್ಲಿಯ ಕಾಡು ಜನರಲ್ಲಿ ಕೆಲವರಿಗೆ ಬೆಂಕೆ ಮಾಡುವದು ಸಹ ಗೊತ್ತಿದ್ದಿಲ್ಲ. ಅದರಿಂದ ಅವರು ಪಶುಗಳಂತೆ ಹಸಿ ಆಹಾರವನ್ನೇ ತಿನ್ನುತ್ತಿದ್ದರು. ಆಹಾರವನ್ನು ಮಾಡಲಿಕ್ಕೆ ಬಾರದಿರುವಂಥ ಕಾಡು ಜನರು ಈಗಲೂ ಇರುವರು.

ಸಾ—ಹಾಗಾದರೆ ಆ ಜನರು ತಮ್ಮ ಆಹಾರವನ್ನು ಹ್ಯಾಗೆ ಸಿದ್ಧಪಡಿಸುವರು? ದೇವರು ಬುದ್ಧಿ ಕೊಟ್ಟರೂ ಮನುಷ್ಯನಿಗೆ ಅಡಿಗೆ ಮಾಡಲಿಕ್ಕೆ ಬಾರದಿರುವದು ಬಹು ಸೋಜಿಗದ ಮಾತು.

ಅ—ಯಾವದೊಂದು ಕಲೆಯನ್ನು ಒಮ್ಮೆಲೆ ಪೂರ್ಣವಾಗಿ ಅರಿಯು

ವದು ಅಶಕ್ಯವು. ಅಡಿಗೆಯ ಮಾತಾದರೂ ಹೀಗೇ ಇರುವದು. ಮನುಷ್ಯನು ಸುಧಾರಿಸುತ್ತ ಹೋದಂತೆ ಅವನ ವಿಚಾರಶಕ್ತಿಯು ಬೆಳೆಯುತ್ತದೆ. ಅವನು ತರತರದ ಕೆಲಸಗಳನ್ನು ಬೇರೆ ಬೇರೆ ಪದ್ಧತಿಗಳಿಂದ ಮಾಡಲಿಕ್ಕೆ ಕಲಿಯುತ್ತಾನೆ. ಕೆಲವು ಜನರು ಸೊಟ್ಟೆಯೊಳಗೆ ಅಡಿಗೆ ಮಾಡುತ್ತಾರೆ. ಬೆಂಕೆಯ ಮೇಲಿಟ್ಟರೆ ಅವು ಸುಟ್ಟು ಬೂದಿಯಾಗುತ್ತವೆ. ಆದ್ದರಿಂದ ಅವರು ಕಲ್ಲುಗಳನ್ನು ಕೆಂಡದಂತೆ ಕಾಸಿ ಅವುಗಳಲ್ಲಿ ಹಾಕುತ್ತಾರೆ. ಕೆಲವು ಜನರು ಆಹಾರವನ್ನು ನೆಲದಲ್ಲಿ ಹುಗಿದು ಮೇಲೆ ಬೆಂಕೆ ಹರವುತ್ತಾರೆ.

ರಂಗು—ಅಹಹ! ಅವರು ಎಂಥ ಕಾಡು ಜನರು! ಕೆಳಗೆ ಆಹಾರವನ್ನು ಮೇಲೆ ಬೆಂಕೆಯನ್ನು ಇಟ್ಟು ಅಡಿಗೆ ಮಾಡುವರೇ? ನಿಜವಾಗಿ ಇವರ ಅಡಿಗೆಯ ಪದ್ಧತಿಯು ತಿರುವುಮುರುವಾಗಿರುವದು.

ಅ—ನೀನು ಇದನ್ನು ತಿರುವುಮುರುವು ಪದ್ಧತಿಯನ್ನುತ್ತೀ; ಆದರೆ ಇದೇ ಮೇರೆಗೆ ಡಬ್ಬಗಾಯಿ ಮಾಡುವಾಗ ಮೇಲೆ ಬೆಂಕೆ, ಕೆಳಗೆ ಅವರೆ, ಬಟ್ಟಗಡಲೆ, ಗೆಣಸುಗಳನ್ನು ನಾವು ಬೇಯಿಸುವದಿಲ್ಲವೇ? ಸುಧಾರಿಸಿದ ಜನರಲ್ಲಿಯಾದರೂ ಅಡಿಗೆಯ ಪದ್ಧತಿಗಳು ಹಲವಿರುವವು. ಇವುಗಳಲ್ಲಿ ಒಂದೆರಡನ್ನು ಹೇಳು.

ರಂ—ಅಡಿಗೆಯ ಪದ್ಧತಿಗಳೆಂದರೇನು? ಎಲ್ಲರೂ ಒಂದೇ ಬಗೆಯಿಂದ ಅಡಿಗೆ ಮಾಡುವರು.

ಅ—ಅಡಿಗೆಯ ಪದ್ಧತಿಗಳು ಹಲವಿರುವವು. ಅನ್ನವನ್ನೂ ಪುರಿಗಳನ್ನೂ ಒಂದೇ ತರದಿಂದ ಮಾಡುತ್ತಾರೋ?

ಸಾ—ಪುರಿಗಳನ್ನು ತುಪ್ಪದಲ್ಲಿ ಕರಿದು ಮಾಡುತ್ತಾರೆ. ಅಕ್ಕಿಯನ್ನು ಬಿಸಿ ನೀರಲ್ಲಿ ಬೇಯಿಸಿ ಅನ್ನ ಮಾಡುತ್ತಾರೆ.

ಅ—ಹೌದು; ಬೇಯಿಸುವದೂ ಕರಿಯುವದೂ ಬೇರೆ ಬೇರೆ ಪ್ರಕಾರದ ಅಡಿಗೆಗಳೆಂದು ನಿನಗೆ ಇವರಿಂದ ಗೊತ್ತಾಗುವದು. ಮನುಷ್ಯರು

ಮೊದಲು ಆಹಾರದ ಪದಾರ್ಥಗಳನ್ನು ಹುರಿದು ತಿನ್ನುತ್ತಿದ್ದರೆಂದು ತೋರುತ್ತದೆ. ಯಾಕೆಂದರೆ, ಹೀಗೆ ಮಾಡಲಿಕ್ಕೆ ಬೇರೆ ಪದಾರ್ಥಗಳೂ ಜಾಣತನವೂ ಬೇಕಾಗುವದಿಲ್ಲ. ಕಮಲೇ, ನಾವು ಹುರಿದು ತಿನ್ನುವ ಪದಾರ್ಥಗಳನ್ನು ಹೇಳು.

ಕ—ನಾವು ಅರಳು ಹುರಿಯುತ್ತೇವೆ; ಕಡಲೆ ಹುರಿದು ಹುರಿಗಡಲೆ ಮಾಡುತ್ತೇವೆ.

ಅ—ಹೌದು, ಆದರೆ ಇವುಗಳನ್ನು ಒಂದು ಪಾತ್ರೆಯಲ್ಲಿ ಹಾಕಿ ಹುರಿಯುತ್ತೇವೆ. ಗೋವಿನಜೋಳ, ಜೋಳದ ಹಸಿ ತೆನೆ, ಸಜ್ಜೆಯ ಹಸಿ ತೆನೆ, ಬಟಾಣಿಯ ತಾಜಾ ಕಾಯಿ ಈ ಮೊದಲಾದ ಆಹಾರದ ಕೆಲವು ಪದಾರ್ಥಗಳನ್ನು ನಾವು ಪ್ರತ್ಯಕ್ಷವಾಗಿ ಬೆಂಕೆಯ ಮೇಲಿಟ್ಟು ಸುಡುತ್ತೇವೆ. ಬಕ್ಕರಿಗಳನ್ನು ಬೆಂಕೆಯ ಜಳಕ್ಕೆ ಹಿಡಿದು ಸುಡುತ್ತೇವೆ. ಬೇಯಿಸುವ ಪದಾರ್ಥಗಳನ್ನೆಲ್ಲ ಎಸರಿನಲ್ಲಿ ಬೇಯಿಸುತ್ತೇವೆ. ಕೆಲವು ಕಾಯಿಪಲ್ಲೆಗಳನ್ನು ಮೊದಲು ಎಸರಿನಲ್ಲಿ ಬೇಯಿಸಿ ಬಳಿಕ ಮಸಾಲೆಯನ್ನು ಹಾಕುತ್ತೇವೆ. ಆದರೆ ಕಾಯಿಪಲ್ಲೆಗಳ ಕೋಸಂಬರಿಯನ್ನು ಮಾಡುವಾಗ ಅವುಗಳನ್ನು ಬೇಯಿಸುವದಿಲ್ಲ. ಅಕ್ಕಿ ಹುಗ್ಗಿ ಹಾಗು ಕೆಲವು ಕಾಯಿಪಲ್ಲೆಗಳನ್ನು ಬೇಯಿಸಿ ಅಡಿಗೆ ಮಾಡುವಾಗ ನಾವು ನೀರುಳಿಯಗೊಡುವದಿಲ್ಲ. ತೊವ್ವೆಯಲ್ಲಿಯೂ ಸ್ವಲ್ಪ ನೀರನ್ನು ಉಳಿಯಗೊಡುತ್ತೇವೆ. ಕೆಲವು ಪದಾರ್ಥಗಳನ್ನು ನಾವು ನೀರಲ್ಲಿ ಬೇಯಿಸುವದಿಲ್ಲ. ಉಗಿಯಿಂದ ಬೇಯಿಸುತ್ತೇವೆ. ಮೋದಕಗಳನ್ನೂ ಹೊಯ್ಗಡಬುಗಳನ್ನೂ ಉಗಿಯಿಂದ ಬೇಯಿಸಿ ಮಾಡುವರು. ಇನ್ನು ಅಡಿಗೆಯ ಬೇರೆ ಬೇರೆ ಪ್ರಕಾರಗಳನ್ನು ಹೇಳಿರಿ.

ಸಾ—ಕರಿಯುವದು, ಕುಚ್ಚುವದು, ಹುರಿಯುವದು, ಉಗಿಯಿಂದ ಬೇಯಿಸುವದು.

---

## ೫೧ನೆಯ ಪಾಠ.

# ನೀರನ್ನೂ ಹಾಲನ್ನೂ ಶುದ್ಧವಿಡುವದು.

ವೈದ್ಯಕಿಯಲ್ಲಿ ಒಂದು ದೊಡ್ಡ ಪರೀಕ್ಷೆ ಕೊಟ್ಟಿದ್ದ ಒಬ್ಬ ಇಂಗ್ಲಿಷ ಹೆಣ್ಣುಮಗಳು ಕೃಷ್ಣಾಬಾಯಿಯ ಗೆಳತಿಯಾಗಿದ್ದಳು. ಒಂದು ದಿನ ಈಕೆಯು ಕೃಷ್ಣಾಬಾಯಿಯ ಮನೆಗೆ ಬಂದು ಸಾವಿತ್ರಿಯ ಸಂಗಡ ಮಾತಾಡುತ್ತಾ ಕುಳಿತಾಗ ಅವರ ಮನೆಯಲ್ಲಿಯೂ ಆ ಹಳ್ಳಿಯಲ್ಲಿಯೂ ಬಹಳ ಜನರು ಬೇನೆ ಬಿದ್ದಿದ್ದರೆಂದು ಆಕೆಗೆ ತಿಳಿಯಿತು. ಕೆಲವರಿಗೆ ಬಹಳ ಜ್ವರ ಬಂದಿತ್ತು; ಕೆಲವರಿಗೆ ಹೊಟ್ಟೆ ಜಾಡಿಸುತ್ತಿತ್ತು; ಕೆಲವರಿಗೆ ಆಮಾಂಶವಾಗಿತ್ತು; ಕೆಲವರಿಗೆ ಊಟ ಹೋಗುತ್ತಿದ್ದಿಲ್ಲ; ಕೆಲವರಿಗೆ ತುಸು ಹೊಟ್ಟೆಶೂಲಿಯಿತ್ತು. ಆ ಊರ ಜನರು ಕುಡಿಯುವ ನೀರು ಕೆಟ್ಟಿರಬಹುದೆಂದೂ ಅದರಿಂದಲೇ ಈ ಎಲ್ಲ ರೋಗಗಳು ಉಂಟಾಗಿರಬಹುದೆಂದೂ ಆ ಇಂಗ್ಲಿಷ ಹೆಣ್ಣುಮಗಳಿಗೆ ತೋರಿತು. ಆದದರಿಂದ ಆಕೆಯು ಸಾವಿತ್ರಿಯನ್ನು ಕರಕೊಂಡು ಆ ಹಳ್ಳಿಯ ಮುಖ್ಯ ಬಾವಿಯ ಬಳಿಗೆ ಹೋದಳು. ಆ ಬಾವಿಯ ಮೇಲೆಯೂ ಅದರ ಸುತ್ತಲೂ ಬಹಳ ಹೊಲಸು ಬಿದ್ದಿತ್ತು. ಬಾವಿಯ ಮೇಲೆಯೇ ಕೆಲವರು ಹೆಂಗಸರು ಬಟ್ಟೆಗಳನ್ನು ಒಗೆಯುತ್ತಿದ್ದರು. ಇದನ್ನೆಲ್ಲ ನೋಡಿ ಆ ಇಂಗ್ಲಿಷ ಹೆಣ್ಣುಮಗಳು ಅಲ್ಲಿ ನೆರೆದಿದ್ದ ಹೆಂಗಸರನ್ನು ಕುರಿತು ಈ ಪ್ರಕಾರ ಮಾತಾಡಿದಳು:—

"ನೀವು ಈ ಬಾವಿಯ ನೀರನ್ನು ಕುಡಿಯುವದಕ್ಕೋಸ್ಕರ ಉಪಯೋಗಿಸುವದರಿಂದಲೇ ನಿಮ್ಮ ಊರಲ್ಲಿ ಇಷ್ಟು ರೋಗಗಳು ಹಬ್ಬಿರುವವು. ಈ ಬಾವಿಯು ಊರಲ್ಲಿರುವ ದಟ್ಟವಾದ ಜನವಸತಿಯುಳ್ಳ ಓಣಿಯ ನಡುವೆ ಇರುವದು. ಇದರ ಸುತ್ತಲು ಹೊಲಸಿನ ತಿಪ್ಪಿಗಳೂ ಅವುಗಳ ಸೆರೆಯಲ್ಲಿ ಪಾಯಿಖಾನೆಗಳೂ ಇರುವವು. ಬಾವಿಯ ಮೇಲೆಯೂ ಅದರ ಸುತ್ತಲೂ ಬಿದ್ದಿರುವ ಹೊಲಸು ಇಲ್ಲಿ ಬೀಳುವ

ನೀರಿನ ಕೂಡ ನೆಲದೊಳಗೆ ಇಂಗಿ ಬಾವಿಯ ನೀರಿನಲ್ಲಿ ಕೂಡಿ ಹುಳುಗಳು ಆಗುತ್ತವೆ. ಇದಲ್ಲದೆ, ನೀರು ಹವೆಯನ್ನು ಹೀರಿಕೊಳ್ಳುವದು. ಆದದರಿಂದ ಬಾವಿಯ ಸುತ್ತಲಿರುವ ಅಶುದ್ಧ ಹವೆಯು ನೀರಿನಲ್ಲಿ ಮಿಶ್ರವಾಗುತ್ತದೆ. ಇಂಥ ನೀರನ್ನು ಪ್ರತಿ ದಿವಸ ಕುಡಿಯುವ ಮನುಷ್ಯರು ಬೇನೆ ಬೀಳುವರು. ಹಾಗು ನೀರು ಹೆಚ್ಚು ಕಡಿಮೆಯಾಗಿ ದೂಷಿತವಾಗಿದ್ದಂತೆ ಹೆಚ್ಚು ಕಡಿಮೆ ಕಷ್ಟಗಳಿಗೆ ಗುರಿಯಾಗುವರು. ಸುತ್ತಲು ಬಿದ್ದಿರುವ ಈ ಹೊಲಸನ್ನು ತೆಗಿಸಿ ಚಲ್ಲಿಸಿರಿ; ಇನ್ನು ಮೇಲೆ ಇಲ್ಲಿ ಅರಿವೆಗಳನ್ನು ಒಗೆಯಬೇಡಿರಿ, ಅಂದರೆ ನಿಮಗೆ ಒಳಿತಾಗುವದು. ಕೆಲವು ಊರ ಜನರು ನದಿಯ ನೀರನ್ನಾಗಲಿ, ಸರೋವರಗಳ ನೀರನ್ನಾಗಲಿ, ಕಟ್ಟಿಸಿದ ಕೆರೆಗಳ ನೀರನ್ನಾಗಲಿ ಕುಡಿಯುವದಕ್ಕೆ ಉಪಯೋಗಿಸುವರು. ಕುಡಿಯುವ ನೀರು ಕೆಡದಂತೆ ನೀವು ಬಹಳ ಎಚ್ಚರಗೊಳ್ಳಬೇಕು. ನಮ್ಮ ದೇಶದ ಜನರು ನೀರನ್ನು ಶುದ್ಧ ಮಾಡದೆ ಎಂದೂ ಕುಡಿಯುವದಿಲ್ಲ. ನೀರನ್ನು ಎರಡು ರೀತಿಯಿಂದ ಶುದ್ಧ ಮಾಡುವದುಂಟು. ಕೆಲವರು ಉಸುಕು-ಇದ್ದಲಿಗಳೊಳಗಿಂದ ನೀರನ್ನು ಹಾಯಿಸುತ್ತಾರೆ. ಆಗ ಅದರಲ್ಲಿರುವ ಹೊಲಸೆಲ್ಲ ಸೋಸಿಹೋಗುವದು. ಕೆಲವರು ನೀರನ್ನು ಕುದಿಸಿ ಆರಿಸಿ ಕುಡಿಯುತ್ತಾರೆ. ಕುದಿಸುವದರಿಂದ ನೀರೊಳಗಿನ ರೋಗದ



ಜಂತುಗಳು ಸತ್ತುಹೋಗುತ್ತವೆ. ನೀವು ನೀರನ್ನು ಈ ಎರಡನೆಯ ರೀತಿಯಿಂದ ಶುದ್ಧಗೊಳಿಸಿದ ಬಳಿಕ ಸೋಸಿ ಕುಡಿದರೆ, ಅಶುದ್ಧ ನೀರನ್ನು ಕುಡಿಯುವದರಿಂದ ಬರುವ ರೋಗಗಳಿಗೆ ಗುರಿಯಾಗುವದಿಲ್ಲ.

ನೀವು ಕುಡಿಯುವ ಹಾಲಾದರೂ ಅಶುದ್ಧವಿರುವದೆಂದು ನನಗೆ ಕಾಣುತ್ತದೆ. ನೀವು ಹಕ್ಕೆಗಳನ್ನು ಹೊಲಸಾಗಿಟ್ಟಿರುವಿರಿ. ಈ ಬಾವಿಯು



( ಸೂಕ್ಷ್ಮದರ್ಶಕ ಯಂತ್ರದಿಂದ ಕಾಣಿಸುವ ಕೊಳಚಿ-ನೀರಿನ ಹನಿಯೊಳಗಿನ ದೋಷಗಳು. )

ಹೊಲಸುನೀರಿನಿಂದ ತೊಳೆದ ಪಾತ್ರೆಗಳಲ್ಲಿಯೇ ನೀವು ಹಾಲು ಹಿಂಡುತ್ತಿರಬಹುದು. ನೀರಿನಂತೆ ಹಾಲಾದರೂ ಹವೆಯನ್ನು ಹೀರಿಕೊಳ್ಳುವದು. ಅಶುದ್ಧ ಹವೆಯು ಕೂಡಿದ ಹಾಲಿನಲ್ಲಿ ರೋಗದ ಜಂತುಗಳಾಗುವವು. ಈ ಊರ ಕೆಲವು ದನಗಳಿಗೆ ಬಹಳ ಕೆಟ್ಟ ರೋಗವಾಗಿರುವದರಿಂದ ಅವು ಕೊಡುವ ಹಾಲಿನಲ್ಲಿ ರೋಗದ ಜಂತುಗಳು ಬೆಳೆಯುತ್ತಿರುವವು. ನೀವು ದನಕರುಗಳಿಗೆ ಆರೋಗ್ಯಕರವಾದ ಆಹಾರವನ್ನು ಹಾಕಬೇಕು; ಹಕ್ಕೆಗಳನ್ನು ಹಸನವಿಡಬೇಕು; ಹಾಲು ಹಿಂಡುವ ಪಾತ್ರೆಗಳನ್ನು ಸ್ವಚ್ಛ ನೀರಿನಿಂದ ತೊಳೆಯಬೇಕು; ಹಾಲನ್ನು ಸ್ವಚ್ಛವಾದ ಸ್ಥಳದಲ್ಲಿಡಬೇಕು; ಹಾಗು ದನಕರುಗಳಿಗೆ ರೋಗಗಳು ತಟ್ಟದಂತೆ ಎಚ್ಚರಗೊಳ್ಳಬೇಕು.''

ಆ ಇಂಗ್ಲಿಷ ಹೆಣ್ಣುಮಗಳು ತನ್ನ ಈ ಉಪದೇಶವನ್ನು ಮುಗಿಸಿದ ಕೂಡಲೆ ಹಳ್ಳಿಯ ಹೆಂಗಸರು ಆಕೆಯ ಉಪಕಾರವನ್ನು ಸ್ಮರಿಸಿದರು. ಬಳಿಕ ಅವರೆಲ್ಲರ ಅಪ್ಪಣೆಯನ್ನು ತೆಗೆದುಕೊಂಡು ಆಕೆಯು ಸಾವಿತ್ರಿಯ ಸಂಗಡ ಮನೆಗೆ ಬಂದಳು.

## ೫೨ನೆಯ ಪಾಠ.

# ನಮ್ಮ ಶರೀರವು.

ಅಕ್ಕನವರು—ಮಕ್ಕಳಿರಾ, ನಮ್ಮ ಶರೀರದ ಬಗ್ಗೆ ನಿಮಗೆ ನಾಲ್ಕು ಮಾತುಗಳನ್ನು ಹೇಳುತ್ತೇನೆ. ಶರೀರದ ಒಳಗೂ ಹೊರಗೂ ಕೆಲವು ಅವಯವಗಳಿರುತ್ತವೆ. ಹೊರಭಾಗದಲ್ಲಿರುವ ಅವಯವಗಳು ನಮಗೆ ಕಾಣುತ್ತವೆ; ಒಳ ಭಾಗದಲ್ಲಿರುವವುಗಳು ಕಾಣುವದಿಲ್ಲ. ಅವು ಗಳನ್ನು ಮುಂದಿನ ಚಿತ್ರದಲ್ಲಿ ತೋರಿಸಿರುವರು. ಇದನ್ನು ನೋಡಿ ನಾವು ಅವುಗಳ ಬಗ್ಗೆ ಕಲಿ ಯಬಹುದು. ನಮ್ಮ ಶರೀರದ ಮುಖ್ಯ ಎರಡು ಭಾಗಗಳು ಯಾವವು?



ಸರಸ್ವತಿ—ರುಂಡ ಹಾಗು ಧಡ ಇವೇ ಶರೀರದ ಎರಡು ಮುಖ್ಯ ಭಾಗಗಳು.

ಅ—ಹೌದು, ತಲೆಬುರುಡೆಯು ಬಹಳ ಗಟ್ಟಿಯಿದ್ದದರಿಂದ ಒಳಭಾಗದಲ್ಲಿರುವ ಕೋಮಲವಾದ ಮಿದುಳನ್ನು ಸಂರಕ್ಷಿಸುತ್ತದೆ. ತಲೆಯ ಒಳಭಾಗದಲ್ಲಿರುವ ಅವಯವಕ್ಕೆ ಮಿದುಳೆಂಬ ಹೆಸರು. ನಕಾಶವನ್ನು ನೋಡಿ ದರೆ ಮಿದುಳಿನ ಆಕೃತಿಯು ಗೊತ್ತಾಗುವದು. ಧಡವು ಶರೀರದ ಎರಡನೆಯ ಮುಖ್ಯ ಭಾಗವು. ಇದರ ಒಳಭಾಗದಲ್ಲಿ ಹಲವು ಅವಯವಗಳಿ ರುತ್ತವೆ. ಕುತ್ತಿಗೆಯ ಕೆಳಗೆ ಎದೆಯ ಗುಂಡಿಯಲ್ಲಿ ಶ್ವಾಸಕೋಶಗಳೂ ರಕ್ತಾಶಯವೂ ಇರುತ್ತವೆ. ನಕಾಶದಲ್ಲಿ ಎರಡು ಪುಪ್ಪುಸಗಳೂ ಅವುಗಳ ಹತ್ತರ ರಕ್ತಾಶಯವೂ ಉಂಟು. ನಾವು ಶ್ವಾಸ ತೆಗೆದುಕೊಂಡ ಬಳಿಕ

ಫುಪ್ಫುಸಗಳು ಹವೆಯಿಂದ ತುಂಬಿರುತ್ತವೆ. ರಕ್ತಾಶಯವು ಎದೆಯಲ್ಲಿ ಸ್ವಲ್ಪ ಎಡಗಡೆಗೆ ಇರುತ್ತದೆ. ಇದರಲ್ಲಿ ಎಡಕ್ಕೊಂದು ಬಲಕ್ಕೊಂದು ಹೀಗೆ ಎರಡು ಚೀಲದಂಥ ಭಾಗಗಳಿರುವವು. ರಕ್ತಾಶಯವು ದೇಹದ ಎಲ್ಲ ರಕ್ತವು ಸಂಗ್ರಹವಾಗುವ ಸ್ಥಾನವಾಗಿದೆ. ಎದೆಗುಂಡಿಯ ಕೆಳಗೆ ಅನ್ನಾಶಯವು ಇರುವದು. ಇದರ ಬಲಕ್ಕೆ ಯಕೃತ್ತು ( ಪಿತ್ತಾಶಯ ), ಹಾಗು ಎಡಕ್ಕೆ ಪ್ಲೀಹವೆಂಬ ಚೀಲಗಳಿವೆ. ನಡುವೆ ಕರುಳುಗಳು ಇರುತ್ತವೆ. ಇವುಗಳ ಕೆಳಗೆ ಹೊಟ್ಟೆಯ ಕೆಳಭಾಗವಿರುವದು. ಈ ನಕಾಶದಲ್ಲಿ ಇವೆಲ್ಲ ತೋರಿಸಲ್ಪಟ್ಟವೆ.




೧. ದೊಡ್ಡ ಮಿದುಳಿನ ಬಲಭಾಗವೂ ನಿರಿಗೆಗಳೂ
೨. ಕುತ್ತಿಗೆಯ ಎಲುವಿನ ಮಣಿಗಳು.
೩. ಸಣ್ಣ ಮಿದುಳು.
೪. ಮಣಿಶಿರ.
೫. ಬೆನ್ನೆಲುವಿನ ಹೊರಭಾಗಗಳು.
೬. ಬೆನ್ನ ಹುರಿಯೂ ಮಜ್ಜಾತಂತುಗಳೂ.

ಸಾವಿತ್ರಿ—ಶರೀರದಲ್ಲಿ ಇಷ್ಟು ಅವಯವಗಳಿರುವ ಕಾರಣವೇನು?

ಅ— ಪ್ರತಿಯೊಂದು ಅವಯವವು ತನ್ನ ಕೆಲಸವನ್ನು ಮಾತ್ರ ಮಾಡುತ್ತದೆ. ಫುಪ್ಫುಸಗಳೊಳಗಿಂದ ಹಾಯುವ ಹವೆಯು ರಕ್ತವನ್ನು ಶುದ್ಧ ಮಾಡುವದು; ಹಾಗು ಆರೋಗ್ಯಕ್ಕೆ ಅಪಾಯ ಮಾಡುವ ರಕ್ತದೊಳಗಿನ ಕೆಲವು ಪದಾರ್ಥಗಳನ್ನು ಹೊರಗೆ ತಯ

ವದು. ರಕ್ತವು ರಕ್ತವಾಹಿನಿಗಳೊಳಗಿಂದ ನಮ್ಮ ಶರೀರದಲ್ಲಿ ಹರಿದಾಡುವದು. ಮಲಿನ ರಕ್ತವು ರಕ್ತಾಶಯದಿಂದ ಬಲಭಾಗದಲ್ಲಿ ಸಂಗ್ರಹ





ವಾಗಿ ಪುಪ್ಪುಸಗಳಿಗೆ ಹೋಗುವದು. ಹಾಗೂ ಅಲ್ಲಿ ಅದು ಶುದ್ಧವಾಗಿ ಎಡಭಾಗದ ಸಂಚಯಕ್ಕೆ ಬರುವದು. ಅಲ್ಲಿಂದ ಹೊರಟ ರಕ್ತವು ಸಣ್ಣ ದೊಡ್ಡ ರಕ್ತವಾಹಿನಿಗಳೊಳಗಿಂದ ಶರೀರದಲ್ಲೆಲ್ಲ ಹರಿದಾಡುವದು.



ನಾವು ನುಂಗುವ ಆಹಾರವು ಗಂಟಲದೊಳಗಿಂದ ಹಾಯ್ದು ಅನ್ನಾಶಯದೊಳಗೆ ಹೋಗುವದು. ಅನ್ನಾಶಯ, ಯಕೃತ್ತು, ಕರುಳು ಈ ಅವಯವಗಳು ಅದನ್ನು ಪಚನ ಮಾಡುತ್ತವೆ. ಈ ಕಾರ್ಯವು ಹ್ಯಾಗೆ ನಡೆಯುತ್ತದೆಂಬದನ್ನು ಇನ್ನೊಂದು ದಿವಸ ಹೇಳುತ್ತೇನೆ.

ರಂಗು—ಅಕ್ಕನವರೇ, ಮಿದುಳು ಮಾಡುವ ಕಾರ್ಯವನ್ನು ನೀವು ಇನ್ನೂ ಹೇಳಿಲ್ಲ.

ಅ—ನಮ್ಮ ಶರೀರಕ್ಕೆ ಆದ ಜ್ಞಾನವೆಲ್ಲ ಮಿದುಳಿಗೆ ಒಯ್ಯಲ್ಪಡುತ್ತದೆ. ಶರೀರದಲ್ಲಿ ಜ್ಞಾನವನ್ನು ಗ್ರಹಿಸುವ ಅವಯವಗಳು ಕೆಲವಿರುವವು. ಹಾಗು ಕಾರ್ಯವನ್ನು ಮಾಡುವ ಅವಯವಗಳು ಕೆಲವಿರುವವು. ಮಿದುಳು, ಮಜ್ಜಾತಂತುಗಳು ಮೊದಲಾದ ಅವಯವಗಳು ಜ್ಞಾನ ಪಡೆಯುವ ಅವಯವಗಳು. ಕೈಕಾಲು ಮೊದಲಾದವು ಕೆಲಸ ಮಾಡುವ ಅವಯವಗಳು. ಶರೀರದಲ್ಲಿ ಕಸುವನ್ನೂ ಶಕ್ತಿಯನ್ನೂ ಉಂಟುಮಾಡುವದೇ ಧಡದೊಳಗಿರುವ ಅವಯವಗಳ ಮುಖ್ಯ ಕಾರ್ಯವಾಗಿರುತ್ತದೆ.

---

### ೫೩ನೆಯ ಪಾಠ.

## ಶರೀರಸ್ವಚ್ಛತೆ.

ಆರೋಗ್ಯದಿಂದಿರಬೇಕಾದರೆ, ನಾವು ಯಾವಾಗಲೂ ನಿರ್ಮಲವಾಗಿರುವದು ಅವಶ್ಯವಾದದ್ದು. ಶರೀರವನ್ನು ನಿರ್ಮಲ ಮಾಡಬೇಕಾದರೆ, ತೊಗಲು, ಕೂದಲು ಹಾಗು ಹಲ್ಲುಗಳ ಬಗ್ಗೆ ನಾವು ಎಚ್ಚರದಿಂದಿರಬೇಕು. ಸ್ನಾನ ಮಾಡುವದರಿಂದ ನಮ್ಮ ತೊಗಲು ಜಳಜಳವಾಗುವದು. ಹಿಂದಿನ ಪುಸ್ತಕದಲ್ಲಿ ಈ ಬಗ್ಗೆ ನೀವು ಸ್ವಲ್ಪ ಕಲಿತಿರುವಿರಿ. ಸರಿಯಾಗಿ ಸ್ನಾನ ಮಾಡದವರಿಗೆ ಹುರುಕು, ತದ್ದು ಮೊದಲಾದ ಚರ್ಮರೋಗಗಳು ಆಗುವವು. ಇಷ್ಟೇ ಅಲ್ಲ; ಸ್ನಾನಮಾಡದಿರುವದರಿಂದ ಇದಕ್ಕೂ ಹೆಚ್ಚು ಭಯಂಕರವಾದ ರೋಗಗಳು ಒಮ್ಮೊಮ್ಮೆ ಉಂಟಾಗುವವು.

ನಾವು ಮುಂಜಾನೆ ಬೇಗನೆ ಎದ್ದು ಹಲ್ಲು ತಿಕ್ಕಿಕೊಳ್ಳುತ್ತೇವೆ. ಹಲ್ಲು ತಿಕ್ಕದವರ ಬಾಯಿ ನಾರುವದು; ಹಲ್ಲುಗಳು ಕೆಟ್ಟು ಹೋಗುವವು. ಜಾಲಿಯ ಸಣ್ಣ ಹಸಿ ಕಡ್ಡಿಯಿಂದ ಹಲ್ಲನ್ನು ಸ್ವಚ್ಛ ಮಾಡುವದು ಒಳ್ಳೆಯದು. ಜಾಲಿಯು ಸ್ವಲ್ಪ ಒಗರಿರುವದು. ಜಾಲಿ, ಆಲ, ಬೇವು

ಇವುಗಳ ಹಸಿ ಕಡ್ಡಿಗಳನ್ನು ಜಜ್ಜಿ ಕುಂಚದಂತೆ ಮಾಡಿ ಹಲ್ಲು ತಿಕ್ಕುವದರಿಂದ ಹಲ್ಲಿಗೆ ಒಳಿತಾಗುತ್ತದೆಂದು ಹೇಳುವರು. ಇವುಗಳ ತುದಿಯನ್ನು ಚೆನ್ನಾಗಿ ಜಜ್ಜಿ ಹಲ್ಲು ತಿಕ್ಕಲಿಕ್ಕೆ ತಕ್ಕಂತೆ ಮಾತ್ರ ಮಾಡಿಕೊಳ್ಳಬೇಕು. ಹಲ್ಲುಗಳಿಗೆ ಹಳದೀ ಬಣ್ಣವು ಬಂದರೆ ಅಥವಾ ಅವುಗಳ ಮೇಲೆ ಪರೆಯಂಥ ಪದಾರ್ಥವು ಕೂತರೆ ಆಯುಷ್ಯವು ಕಡಿಮೆಯಾಗುವದು. ಚಿಕ್ಕಂದಿನಲ್ಲಿ ಹಲ್ಲು ಬಿದ್ದರೆ ಮೋರೆಯು ಅಂದಗೆಡುವದು. ಅವನಿಗೆ ಮಾತಾಡಲಿಕ್ಕೂ ಆಹಾರವನ್ನು ತಿನ್ನಲಿಕ್ಕೂ ತೊಂದರೆಯಾಗುವದು. ಕರಿಬಟ್ಟೆ, ಬಾದಾಮಿಯ ಸೊಟ್ಟೆ ಸುಟ್ಟು ಮಾಡಿದ ಹಲ್ಲುಪುಡಿ, ಇದ್ದಲಿಯಪುಡಿ, ಖಡುವಿನಪುಡಿ ಇವುಗಳಲ್ಲೊಂದರಿಂದ ಹಲ್ಲು ತಿಕ್ಕಿದರೆ ಅವು ಹಸನಾಗುತ್ತವೆ. ಖಡುವಿನಲ್ಲಿ ಸ್ವಲ್ಪ ಕಪ್ಪುರವನ್ನು ಬೆರಸಿ ಮಾಡಿದ ಪುಡಿಯಿಂದ ಹಲ್ಲು ತಿಕ್ಕಿದರೆ ಅವು ಕೆಡುವದಿಲ್ಲ. ಒಸಡಿಗಳು ಉಬ್ಬಿದಾಗ ಇಲ್ಲವೆ ಹಲ್ಲು ಸೂಲಿಯಾದಾಗ ಹತ್ತು ತೊಲೆ ಫಟಕ, ಮೂರು ತೊಲೆ ಕೆಂಪು ಖಡು, ಒಂದು ತೊಲೆ ಯಾಲಕ್ಕಿ, ಹಾಗು ಒಂದು ತೊಲೆ ಶಕ್ಕರ ಇವೆಲ್ಲವುಗಳನ್ನು ಕೂಡಿಸಿ ಮಾಡಿದ ಪುಡಿಯಿಂದ ಹಲ್ಲು ತಿಕ್ಕಿದರೆ ಬಹಳ ಹಿತವಾಗುವದು. ಹಲ್ಲು ತಿಕ್ಕುವಾಗ ನಾವು ಯಥೇಷ್ಟವಾಗಿ ನೀರನ್ನು ಉಪಯೋಗಿಸಬೇಕು. ಅವಸರ ಮಾಡಬಾರದು. ಬಹಳ ಸಾರೆ ಬಾಯಿ ಮುಕ್ಕಳಿಸಬೇಕು. ಕಣ್ಣು ತೊಳೆದುಕೊಳ್ಳಬೇಕು. ಹಾಗು ಹಲ್ಲು ತಿಕ್ಕುವ ಕಡ್ಡಿಗಳಿಂದ ನಾಲಿಗೆಯ ಮೇಲಿನ ಹೊಲಸನ್ನು ತಿಕ್ಕಿ ತೆಗೆಯಬೇಕು.

ತಲೆಯ ಕೂದಲನ್ನು ಯಾವಾಗಲೂ ಸ್ವಚ್ಛ ಇಡುವ ಬಗ್ಗೆ ನಾವು ಬಹಳ ಎಚ್ಚರದಿಂದಿರಬೇಕು. ದಿನಾಲು ತಲೆ ಬಾಚಿಕೊಳ್ಳಬೇಕು. ವಾರಕ್ಕೊಮ್ಮೆಯಾದರೂ ಎರಕೊಂಡು ಸ್ವಚ್ಛ ಮಾಡಿಕೊಳ್ಳಬೇಕು. ಎರಕೊಳ್ಳುವಾಗ ಸೀಗೆಕಾಯಿ, ಅಂಟಳಕಾಯಿ, ಮಜ್ಜಿಗೆ, ಮೊಸರು, ಜಿಗುಟು ಮಣ್ಣು ಇವುಗಳನ್ನು ಉಪಯೋಗಿಸಬೇಕು. ತಿಕ್ಕಿ ಸ್ವಚ್ಛ ಮಾಡದಿದ್ದರೆ ಕೂದಲು ಜಡೆಗಟ್ಟುವದು. ತಲೆಕೂದಲನ್ನು ನಾವು ಎಚ್ಚರದಿಂದ ಬಾಚಿ

ಕೊಳ್ಳದಿದ್ದರೆ, ತಲೆತುಂಬ ಹೇನಾಗಿ ತಿಂಡಿಯೇಳುತ್ತದೆ. ಇದರಿಂದ ಹುಣ್ಣೂ ಹುರಕೂ ಆಗುತ್ತವೆ. ಹೇನು ಆದರೆ ಬಿಸಿ ನೀರು ಸುರುವಿ ಕೂದಲನ್ನು ಹಿಕ್ಕಬೇಕು. ಹೇನಿನಿಂದ ಬಹಳ ತ್ರಾಸವಾಗುತ್ತಿದ್ದರೆ ಸ್ವಲ್ಪ ನೀರಿನಲ್ಲಾಗಲಿ, ಎಣ್ಣೆಯಲ್ಲಾಗಲಿ ಬೇವಿನ ಹಣ್ಣನ್ನು ತೆಯಿದು ತಲೆಗೆ ಚೆನ್ನಾಗಿ ತಿಕ್ಕಬೇಕು. ಅಂದರೆ ಅವು ಸತ್ತುಹೋಗುತ್ತವೆ. ಒಂದು ಹೇನಿನಿಂದಾಗಲಿ ಅದರ ತತ್ತಿಯಿಂದಾಗಲಿ ಬಹಳ ಮರಿಗಳು ಹುಟ್ಟುತ್ತವೆಂಬದನ್ನು ಲಕ್ಷ್ಯದಲ್ಲಿಡಬೇಕು. ಒಳ್ಳೆಣ್ಣೆಯನ್ನಾಗಲಿ ಕೊಬ್ಬರಿಯ ಎಣ್ಣೆಯನ್ನಾಗಲಿ ಹಚ್ಚಿ ಕೂದಲನ್ನು ಹಿಕ್ಕಬೇಕು. ಇದನ್ನು ತಲೆಗೆ ಚೆನ್ನಾಗಿ ತಿಕ್ಕಿದರೆ ಮಿದುಳಿಗೆ ತಂಪೆನಿಸುವದು. ಆದರೆ ಬಹಳ ಎಣ್ಣೆ ಹಚ್ಚುವದರಿಂದ ಕೂದಲು ಜಿಗುಟಾಗುತ್ತವೆ. ಅದರ ಮೇಲೆ ಸುಲಭವಾಗಿ ಹೊಲಸು ಕೂತು ಅರಿವೆಗಳು ಕೆಡುತ್ತವೆ. ಹೆಂಗಸರು ಉಡುವ ನೂಲಿನ ಇಲ್ಲವೆ ರೇಶಿಮೆಯ ಬೆಲೆಯುಳ್ಳ ಸೀರೆಯು ತಲೆಗೆ ಹಚ್ಚಿದ ಎಣ್ಣೆಯಿಂದ ಹೊಲಸಾದದ್ದನ್ನು ನೋಡಿದರೆ ಅಸಹ್ಯವಾಗುವದು. ತಲೆಗೆ ಬಹಳ ಎಣ್ಣೆ ಹಚ್ಚುವದರಿಂದ ತಲೆದಿಂಬುಗಳ ಮೇಲೆಯೂ ಕಲೆಗಳು ಬೀಳುವದರಿಂದ ಅವು ಹೊಲಸು ಕಾಣುತ್ತವೆ. ತಲೆಗೂದಲನ್ನು ಬಿಚ್ಚಿಬಿಡುವದರಿಂದ ಕೂದಲು ತೊಡಕಾಗುವವು. ಹಾಗು ಅಸಹ್ಯ ಕಾಣುವದು. ಕೂದಲು ತೊಡಕಾದರೆ ಹಿಕ್ಕುವಾಗ ಬಹಳ ಕೂದಲು ಹರಿದುಬರುವವು. ಮೊದಲು ತಲೆಗೂದಲನ್ನು ತೊಳೆದು ಸ್ವಚ್ಛ ಮಾಡಬೇಕು. ಬಳಿಕ ಅದಕ್ಕೆ ಎಣ್ಣೆ ಹಚ್ಚಿ ಹಿಕ್ಕಿ ಹೆಳಲು ಹಾಕಿಕೊಳ್ಳಬೇಕು. ಅಥವಾ ಗಂಟುಹಾಕಿಕೊಳ್ಳಬೇಕು. ಹೆಳಲು ಹಾಕಿಕೊಳ್ಳುವಾಗಾಗಲಿ, ಬುಜಡೆ ಕಟ್ಟಿಕೊಳ್ಳುವಾಗಾಗಲಿ ಕೂದಲನ್ನು ಬಹಳ ಜಗ್ಗಬಾರದು. ಹಾಗು ಬಿಡಿಕೂದಲನ್ನು ಬಿಡಬಾರದು. ಕೂದಲನ್ನು ಬಹಳ ಜಗ್ಗಿ ಹೆಳಲು ಹಾಕುವದರಿಂದ ಮುಂದಲೆಯ ಕೂದಲುಗಳು ಉದುರುತ್ತವೆ. ಹಾಗು ಆ ಭಾಗವು ಬೋಳಾಗಿ ಕಾಣುತ್ತದೆ.

ಶರೀರವು ಸ್ವಚ್ಛವಿರಬೇಕಾದರೆ ಕೈಕಾಲು ಉಗುರುಗಳ ಕಡೆಗೆ ಸಹ ಲಕ್ಷ್ಯಕೊಡಬೇಕು. ಉಗುರು ಬಹಳ ಬೆಳೆದರೆ ಅದರಲ್ಲಿ ಹೊಲಸು ಕೂಡ್ರುವದು. ಕಪ್ಪು ಕಂಡರೆ ಅವುಗಳಲ್ಲಿ ಹೊಲಸು ತುಂಬಿರುವದೆಂದು ನಾವು ತಿಳಿದುಕೊಳ್ಳಬೇಕು. ಈ ಹೊಲಸು ನಾವು ಉಣ್ಣುವ ಹಾಗು ಕುಡಿಯುವ ಪದಾರ್ಥಗಳೊಡನೆ ಕೂಡುವದು. ಆದ್ದರಿಂದ ಕೈಕಾಲುಗಳನ್ನು ತೊಳೆದುಕೊಳ್ಳುವಾಗ ಹಾಗು ಸ್ನಾನ ಮಾಡುವಾಗ ಅದನ್ನು ತೆಗೆದುಬಿಡಬೇಕು. ಉಗುರು ಬೆಳೆದರೆ ಅವನ್ನು ಕತ್ತರಿಸಬೇಕು.

---

## ೩೪ನೆಯ ಪಾಠ.

## ಶರೀರದ ಉಷ್ಣತೆಯು. (ಭಾಗ ೧.)

ಅಕ್ಕನವರು—ಮಕ್ಕಳಿರಾ, ಚಳಿಗಾಲದಲ್ಲಿ ನಾವು ಉಣ್ಣೆಯ ಅರಿವೆಗಳನ್ನು ತೊಡುವ ಕಾರಣವನ್ನು ಬಲ್ಲಿರಾ?

ಸಾವಿತ್ರಿ—ಚಳಿಗಾಲದಲ್ಲಿ ಅವು ನಮ್ಮ ಶರೀರದ ಉಷ್ಣತೆಯನ್ನು ಕಾಯುವವು.

ಅ—ಹೌದು; ಆದರೆ ಶರೀರಕ್ಕೆ ಉಷ್ಣತೆಯು ಯಾತರಿಂದ ಸಿಗುವದೆಂಬದು ನಿಮಗೆ ಗೊತ್ತಿರುವದೋ?

ಕಮಲೆ—ಉಷ್ಣತೆಯು ಶರೀರದಲ್ಲಿಯೇ ಹುಟ್ಟುವದು.

ಅ—ಅದು ಎಲ್ಲಿಯೂ ತಾನಾಗಿ ಹುಟ್ಟಲಾರದು. ನಿನ್ನ ತಮ್ಮ ರಾಮುನಿಗೆ ಜಡ್ಡಾದಾಗ ಡಾಕ್ಟರರು ಅವನನ್ನು ಪರೀಕ್ಷಿಸಿ ಏನು ಹೇಳಿದರೆಂಬದು ನಿನಗೆ ಸೆನಪಿದೆಯೋ?

ಕ—ಡಾಕ್ಟರರು ನಾಡಿಯನ್ನು ನೋಡಿ ಅವನ ಜಠರಾಗ್ನಿಯು ಮಂದವಿರುತ್ತದೆಂದರು. ಆದರೆ ಅವರು ಹೇಳಿದ್ದು ನನಗೆ ತಿಳಿಯಲಿಲ್ಲ.

ಅ—ಜಠರವೆಂದರೆ ಹೊಟ್ಟೆ, ಅಗ್ನಿ ಎಂದರೆ ಬೆಂಕೆ ಅಥವಾ ಉಷ್ಣತೆ. ಜಠರಾಗ್ನಿಯೆಂದರೆ ಹೊಟ್ಟೆಯೊಳಗಿನ ಉಷ್ಣತೆ. ಹೊಟ್ಟೆಯು

ಒಂದು ಒಲೆಯು; ಅದರಲ್ಲಿ ಯಾವಾಗಲೂ ಬೆಂಕೆಯಿರುವದು ಎಂದು ನಾನು ಹೇಳುತ್ತೇನೆ. ಹೀಗೆಂದರೆ ನಂಬುವೆಯಾ ?

ಸರಸ್ವತಿ—ಹೊಟ್ಟೆಗೆ ಒಲೆಯೆನ್ನಬಹುದೇ? ಅದರಲ್ಲಿ ಬೆಂಕೆಯು ಹ್ಯಾಗೆ ಇರುವದು?

ಅ—ಹೊಟ್ಟೆಯಲ್ಲಿ ಬೆಂಕೆಯು ಯಾವಾಗಲೂ ಉರಿಯುತ್ತಿರುವದು. ಹಾಗು ಒಂದೇಸವನೆ ಉರವಲವನ್ನು ಹಾಕಿ ನಾವು ಅದನ್ನು ಉರಿಯ ಹಚ್ಚುತ್ತೇವೆ.

ರಂಗು—ಅಕ್ಕನವರೇ, ನೀವು ಚೇಷ್ಟೆ ಮಾಡುತ್ತೀರಿ; ನಾವು ಅದರೊಳಗೆ ಉರವಲವನ್ನು ಯಾವಾಗ ಒಗೆಯುತ್ತೇವೆ?

ಅ—ನೀವೆಲ್ಲರೂ ಉಗಿಬಂಡಿಯನ್ನು ನೋಡಿರುವಿರಷ್ಟೇ? ಅದಕ್ಕೆ ಮರಾಠಿಯಲ್ಲಿ “ಆಗಗಾಡಿ” ಎಂದು ಯಾಕೆ ಎನ್ನುತ್ತಾರೆ? ಅದು ಯಾತರಿಂದ ನಡೆಯುತ್ತದೆ?

ಕ—ಅದು ಬೆಂಕೆಯಿಂದ ನಡೆಯುತ್ತದೆ.

ಅ—ಅದು ಬೆಂಕೆಯಿಂದ ನಡೆಯುತ್ತದೆಂದು ತಿಳಿದು ಆಗಗಾಡಿಯೆನ್ನುವರು. “ಆಗ” ಅಂದರೆ ಬೆಂಕೆ ಎಂದು ಅರ್ಥವಾಗುವದು. ಆಗಗಾಡಿಯೆಂದರೆ ಬೆಂಕೆಯಿಂದ ನಡೆಯುವ ಗಾಡಿಯು. ಆದರೆ ನಿಜವಾಗಿ ಅದು ಬೆಂಕೆಯಿಂದ ನಡೆಯುವದಿಲ್ಲ.

ಸ—ಉಗಿಬಂಡಿಯು ಉಗಿಯಿಂದ ನಡೆಯುತ್ತದೆಂದು ಅಣ್ಣನು ನನಗೆ ಒಮ್ಮೆ ತಿಳಿಸಿಕೊಟ್ಟಿರುವನು.

ಅ—ನಿಮ್ಮಣ್ಣನು ಹೇಳಿದ್ದು ನಿಜವು. ಉಗಿಬಂಡಿಯೂ ಇತರ ಹಲವು ಯಂತ್ರಗಳೂ ಉಗಿಯಿಂದ ನಡೆಯುತ್ತವೆ. ಆದರೆ ಬೆಂಕೆಯಿಲ್ಲದೆ ನೀರು ಉಗಿಯಾಗುವದಿಲ್ಲ. ಎಂಜಿನದಲ್ಲಿ ಕಟ್ಟಿಗೆಯನ್ನಾಗಲಿ ಕಲ್ಲಿದ್ದಲಿಯನ್ನಾಗಲಿ ಯಾವಾಗಲೂ ಹಾಕುತ್ತಿರಬೇಕಾಗುತ್ತದೆ.

ಸ—ಕಲ್ಲಿದ್ದಲಿ ಹಾಕುವವನನ್ನು ಒಮ್ಮೆ ನೋಡಿದೆನು; ಅವನ ಅರಿವೆಗಳೂ ಮೈಯೂ ಕಪ್ಪಾಗಿದ್ದವು.

ಅ—ಎಂಜಿನದಲ್ಲಿ ಕಟ್ಟಿಗೆಯನ್ನಾಗಲಿ ಇದ್ದಲಿಯನ್ನಾಗಲಿ ಹಾಕುವಂತೆ ನಮ್ಮ ದೇಹದಲ್ಲಿ ಉಷ್ಣತೆಯನ್ನು ಕಾಯುವದಕ್ಕಾಗಿ ಅದರಲ್ಲಿ ಉರವಲವನ್ನು ಹಾಕಬೇಕಾಗುತ್ತದೆ. ಸಾಕಷ್ಟು ಉರವಲವನ್ನು ನಾವು ಹಾಕದಿದ್ದರೆ ಅದರಲ್ಲಿ ತುಪ್ಪವನ್ನು ಸುರುವಬೇಕಾಗುವದು.

ರಂ—ಅಕ್ಕನವರೆ, ಈ ದಿನ ನೀವು ವಿನೋದದ ಮಾತುಗಳನ್ನೇ ಆಡುತ್ತೀರಲ್ಲ!

ಅ—ನಾನು ಹೇಳುವದು ನಿಜವಿರುವದು. ನಾವು ಬೇಳೆ, ಅಕ್ಕಿ, ರೊಟ್ಟಿ, ಪಲ್ಲೆ ಮೊದಲಾದವುಗಳನ್ನು ದಿನಾಲು ತಿನ್ನುತ್ತೇವೆ. ಅನ್ನದ ಮೇಲೆ ತುಪ್ಪ ಹಾಕಿಕೊಳ್ಳುತ್ತೇವೆ. ರೊಟ್ಟಿಗೆ ತುಪ್ಪ ಹಚ್ಚಿ ತಿನ್ನುತ್ತೇವೆ. ಪಲ್ಲೆಯನ್ನು ತುಪ್ಪದಲ್ಲಿ ಇಲ್ಲವೆ ಎಣ್ಣೆಯಲ್ಲಿ ಕರಿಯುತ್ತೇವೆ. ಪಲ್ಲೆಗೆ ತುಪ್ಪದ ಅಥವಾ ಎಣ್ಣೆಯ ಒಗ್ಗರಣೆಯನ್ನು ಕೊಡುತ್ತೇವೆ. ಇದನ್ನೆಲ್ಲ ನಾವು ಯಾಕೆ ತಿನ್ನುತ್ತೇವೆ?

ಕ—ನಮ್ಮ ಶರೀರಕ್ಕೆ ಬಲ ಬರಬೇಕೆಂದು ತಿನ್ನುತ್ತೇವೆ.

ಅ—ಶರೀರಕ್ಕೆ ಕಸುವು ಬರಬೇಕೆಂದು ನಾವು ಆಹಾರವನ್ನು ತಿನ್ನುವಂತೆ ಶರೀರದಲ್ಲಿ ಉಷ್ಣತೆಯನ್ನು ಹುಟ್ಟಿಸಲಿಕ್ಕೂ ನಾವು ಆಹಾರವನ್ನು ತಕ್ಕೊಳ್ಳುತ್ತೇವೆ. ನಮ್ಮ ಶರೀರದ ಪೋಷಣ-ರಕ್ಷಣಗಳಿಗೂ ಅದು ಮಾಡುವ ಕೆಲಸಕ್ಕೂ ಉಷ್ಣತೆಯು ಬೇಕಾಗುವದು. ನಮ್ಮ ಶರೀರದ ಉಷ್ಣತೆಯನ್ನೆಲ್ಲ ಕಳಕೊಂಡರೆ ನಾವು ಸತ್ತುಹೋಗುವೆವು. ನಾವು ತಿನ್ನುವ ಆಹಾರವು ಉರವಲದ ಕೆಲಸವನ್ನು ಮಾಡುವದು. ಆಹಾರದ ಪದಾರ್ಥಗಳೆಂಬ ಉರವಲವು ಹವೆಯ ಕಾರ್ಯದಿಂದ ಉಷ್ಣತೆಯನ್ನುಂಟುಮಾಡುವದು.

ಸಾ—ಇದು ಬಹಳ ಸೋಜಿಗವಾದದ್ದು.

---

## ೫೫ನೆಯ ಪಾಠ.

## ಶರೀರದ ಉಷ್ಣತೆಯು. (ಭಾಗ ೨.)

ಅ—ಆಹಾರದಲ್ಲಿ ಹವೆಯು ಕೂಡಿ ಉಷ್ಣತೆಯನ್ನುಂಟುಮಾಡು ವದೆಂದರೆ ನಿಮಗೆ ನಿನ್ನೆ ಸೋಜಿಗವೆನಿಸಿತು. ಶರೀರವು ಆಹಾರವನ್ನು ಉಪಯೋಗಿಸಿಕೊಂಡರೆ ಉಷ್ಣತೆಯು ಕಡಿಮೆಯಾಗುತ್ತದೆ. ಹೀಗಾದರೆ ನಾವು ಮತ್ತೆ ಆಹಾರವನ್ನು ತಿನ್ನಬೇಕಾಗುವದು. ಹೊಟ್ಟೆಯಲ್ಲಿ ಆಹಾರವೆಂಬ ಉರವಲವನ್ನು ಹಾಕದಿದ್ದರೆ ಹೊಟ್ಟೆಯಲ್ಲಿರುವ ಬೆಂಕೆಯು ಸಣ್ಣಗೆ ಉರಿಯುವದು. ಹಾಗು ಶರೀರವು ನಿತ್ರಾಣವಾಗುವದು. ಹೊಟ್ಟೆಯಲ್ಲಿ ಹಾಕಿದ್ದೆಲ್ಲ ಭಸ್ಮವಾಗುತ್ತದೆಂದು ಬೈಲುಸೀಮೆಯವರು ಹೇಳುವರು. ಅಂದ ಮೇಲೆ ಹೊಟ್ಟೆಯಲ್ಲಿ ಎಂಥ ಬೆಂಕೆಯಿರಲಿಕ್ಕೆ ಬೇಕು ನೋಡಿರಿ!

ಸಾ—ಆಹಾರದ ಉಪಯೋಗವು ಉರವಲದಂತಿರುವದೆಂದು ನೀವು ಹೇಳಿದಿರಿ. ಹಾಗಾದರೆ ಅದು ಹೊಟ್ಟೆಯಲ್ಲಿ ಉರವಲದಂತೆ ಉರಿಯುತ್ತಿರುವದೋ? ಅದು ಉರಿಯುವದು ನಿಜವಿದ್ದರೆ ನಾವು ಯಾಕೆ ಸುಟ್ಟು ಬೂದಿಯಾಗುವದಿಲ್ಲ?

ಅ—ಆಹಾರವು ಕಲ್ಲಿದ್ದಲಿಯಂತೆ ಅಥವಾ ಕಟ್ಟಿಗೆಯಂತೆ ಉರಿಯುವದಿಲ್ಲ. ಮೆಲ್ಲನೆ ಸುಟ್ಟು ಉಷ್ಣತೆಯನ್ನುಂಟುಮಾಡುವದು. ಶರೀರದೊಳಗಿನ ಉಷ್ಣತೆಯು ಕಡಿಮೆಯಾದಾಗ ನಾವು ಬೇಕಾದಷ್ಟು ಉಣ್ಣೆಯ ಅಂಗಿಗಳನ್ನು ತೊಟ್ಟರೂ ಹೊಸ ಉಷ್ಣತೆಯು ಹುಟ್ಟಲಾರದು. ಶರೀರದೊಳಗಿನ ಉಷ್ಣತೆಯು ವಿಲಕ್ಷಣವಾದದ್ದಿರುವದು. ಹಗಲು, ರಾತ್ರಿ, ಬೇಸಿಗೆ, ಚಳಿಗಾಲ, ಮಳಿಗಾಲಗಳಲ್ಲಿಯೂ ಅಷ್ಟೇ ಇರುವದು. ಆದರೆ ಅವಶ್ಯವಿರುವಷ್ಟು ಉರವಲವನ್ನು ಹಾಕದಿದ್ದರೆ ಅದು ಕಡಿಮೆಯಾಗುವದು.

ಸ— ಒಮ್ಮೊಮ್ಮೆ ನನ್ನ ಮೈಯು ವಾಡಿಕೆಗಿಂತ ಹೆಚ್ಚು ಉಷ್ಣ ವಾಗುತ್ತಿರುವದು. ಇದರ ಕಾರಣವೇನಿರಬಹುದು?

ಅ— ನಾವು ಬಹಳ ಉಷ್ಣತೆ ಹುಟ್ಟುವಂಥ ಉರವಲವನ್ನು ಹೊಟ್ಟೆ ಯಲ್ಲಿ ಹಾಕಿದರೆ, ಬಹಳ ವ್ಯಾಯಾಮ ಮಾಡಿದರೆ, ಹೊರಗಿನ ಉಷ್ಣ ತೆಗೆ ಮೈಯೊಡ್ಡಿದರೆ, ಅಥವಾ ಗಾಬರಿಯಾದರೆ ಶರೀರದೊಳಗಿನ ಉಷ್ಣ ತೆಯು ಹೆಚ್ಚಾಗುವದು. ಹೀಗಾದರೂ ರಕ್ತದ ಉಷ್ಣತೆಯು ಬಹಳ ಹೆಚ್ಚಾಗುವದಿಲ್ಲ. ಯಾರಾದರೂ ಸಿಟ್ಟಿಗೆದ್ದರೆ ಅಥವಾ ಜಗಳಕ್ಕೆ ನಿಂತರೆ, "ಯಾಕೆ ರಕ್ತ ಸುಟ್ಟುಕೊಳ್ಳುತ್ತೀರಿ" ಎನ್ನುತ್ತೇವೆ. ಸಿಟ್ಟಿಗೆದ್ದ ಮನು ಷ್ಯನ ರಕ್ತವು ಕುದಿಯುವದೆಂದರೆ ಸಿಟ್ಟಿನಿಂದ ರಕ್ತದ ಉಷ್ಣತೆಯು ಹೆಚ್ಚಾಗುವದು. ಉಷ್ಣ ರಕ್ತವು ಚರ್ಮದ ಕಡೆಗೆ ಒತ್ತರದಿಂದ ಹರಿದು ಬರುವದರಿಂದ ಮೋರೆಯು ಕೆಂಪಾಗುವದು. ಶರೀರದೊಳಗಿನ ಉಷ್ಣ ತೆಯು ಮಿತಿಮೀರಿ ಹೆಚ್ಚಾದರೆ ಅಥವಾ ಕಡಿಮೆಯಾದರೆ, ನಾವು ಬೇನೆ ಬೀಳುತ್ತೇವೆ. ಒಮ್ಮೊಮ್ಮೆ ನಮಗೆ ಬಹಳ ಜಡ್ಡಾಗುತ್ತದೆ.

ಕ— ಬಹಳ ಜಡ್ಡು ಯಾಕೆ ಆಗುತ್ತದೆ?

ಅ— ಉಷ್ಣತೆಯು ಹೆಚ್ಚಾದರೆ ರಕ್ತವು ಒತ್ತರದಿಂದ ಮಿದುಳಿ ನೊಳಗೆ ಹೋಗುತ್ತದೆ. ಆಗ ಜೀವವೇ ಹೋಗುತ್ತದೆ. ಅದು ಕಡಿಮೆ ಯಾದರೆ ರಕ್ತಾಶಯದ ಕಾರ್ಯವು ಮಂದವಾಗುತ್ತದೆ. ಹೀಗಾದರೂ ಪ್ರಾಣ ಹೋಗುವದು.

ಕ— ಹಾಗಾದರೆ ನಮ್ಮ ಶರೀರಕ್ಕೆ ಎಷ್ಟು ಉಷ್ಣತೆಯು ಅವಶ್ಯ ವಾದದ್ದು?

ಅ— ಸಾಮಾನ್ಯವಾಗಿ ಎಲ್ಲರ ಶರೀರದ ಉಷ್ಣತೆಯು ಅಷ್ಟೇ ಇರು ವದು. ನಿಮ್ಮ ಶರೀರದ ಉಷ್ಣಮಾನವನ್ನು ನೋಡಬೇಕೆನ್ನುವಿರಷ್ಟೇ? ಅಗೋ, ಸಾಲೆಯ ಗಂಟೆಯಾಯಿತು; ಶರೀರದ ಉಷ್ಣತೆಯನ್ನು ಅಳೆಯು ವದನ್ನು ನಿಮಗೆ ತೋರಿಸುತ್ತೇನೆ.

ಹೀಗೆಂದು ಅಕ್ಕನವರು ಒಂದು ಕಾಜಿನ ಕೊಳಿವೆಯನ್ನು ತಂದು ಪ್ರತಿಯೊಬ್ಬ ಹುಡುಗೆಯ ಬಗಲಲ್ಲಿ ಅದನ್ನು ಐದು ಮಿನಿಟುಗಳತನಕ ಇಟ್ಟರು. ಹಾಗು— ಈ ಕೊಳಿವೆಯ ಕೆಳಭಾಗದಲ್ಲಿ ಪಾರಜವಿರುವದು. ಉಷ್ಣತೆಯಿಂದ ಅದು ವಿಸ್ತಾರವಾಗಿ ಕೊಳಿವೆಯ ಮೇಲ್ಭಾಗದಲ್ಲಿರುವ ಪೊಳ್ಳಿನಲ್ಲಿ ಏರಹತ್ತುವದು. ಈ ಪೊಳ್ಳುನಳಿಕೆಯ ಮೇಲೆ ಗುರುತು ಮಾಡಿ ಅಂಕೆಗಳನ್ನು ಹಾಕಿರುವರು. ಪಾರಜವು ನಿಲ್ಲುವಲ್ಲಿರುವ ಅಂಕೆಯು ಶರೀರದ ಉಷ್ಣಮಾನವನ್ನು ತೋರಿಸುವದು, ಎಂದು ಅವರಿಗೆ ತಿಳಿಸಿ ಕೊಟ್ಟರು. ಪ್ರತಿಯೊಬ್ಬ ಹುಡುಗೆಯ ಉಷ್ಣತೆಯು ೯೮° ಇಲ್ಲವೆ ೯೮°॥ ಇರುವದೆಂದು ಗೊತ್ತಾಯಿತು. ಇದಲ್ಲದೆ ನಾಡಿ ಹಾರುವದನ್ನು ಪರೀಕ್ಷಿಸಿ ಶರೀರದ ಉಷ್ಣತೆಯು ಹೆಚ್ಚಾಗಲಿ ಕಡಿಮೆಯಾಗಲಿ ಇರುವದನ್ನು ಗೊತ್ತು ಪಡಿಸಬಹುದಾದರೂ, ಆದರಿಂದ ಇಷ್ಟೇ ಉಷ್ಣತೆಯು ಇರುವದೆಂದು ಹೇಳಲಾಗುವದಿಲ್ಲೆಂಬದನ್ನು ಸಹ ಅಕ್ಕನವರು ತಿಳಿಸಿದರು.

---

## ೫೬ ನೆಯ ಪಾಠ.

## ಅನ್ನಾಶಯವೂ ಪಚನವೂ.

ಅಕ್ಕನವರು— ನಾವು ಶರೀರದ ಉಷ್ಣತೆಯ ಬಗ್ಗೆ ಕಲಿತಿರುವೆವು. ಹೊಟ್ಟೆಯೊಳಗೆ ಯಾವ ಅವಯವಗಳಿರುತ್ತವೆ?

ಸಾವಿತ್ರಿ— ಪಿತ್ತಾಶಯ, ಪ್ಲೀಹ, ಕರುಳು, ಹಾಗು ಹೊಟ್ಟೆಯ ಕೆಳಭಾಗ.

ಅ— ಹೊಟ್ಟೆಯು ನಮ್ಮ ಶರೀರದೊಳಗಿನ ಒಂದು ದೊಡ್ಡ ಪೊಳ್ಳು ಇರುವದು. ಪಿತ್ತಾಶಯ, ಪ್ಲೀಹ, ಕರುಳು, ಹೊಟ್ಟೆಯ ಕೆಳಭಾಗ ಇವುಗಳ ಹೊರತು ಪ್ಲೀಹದ ಮೇಲ್ಬದಿಗೆ ಅನ್ನಾಶಯವೂ, ಪಿತ್ತಾಶಯದ ನೆರೆಯಲ್ಲಿ ಪಿತ್ತವು ಕೂಡಬೀಳುವ ಒಂದು ಚೀಲವೂ ಇರುವವು. ಅನ್ನಾಶಯವು ಒಂದು ಚೀಲದಂತಿರುತ್ತದೆ. ಇದಕ್ಕೆ ಮೇಲೊಂದು,



ಬದಿಯಲ್ಲೊಂದು ಹೀಗೆ ಎರಡು ಬಾಯಿಗಳಿರುವವು. ಇದು ಪಚನಕ್ರಿಯೆಯು ನಡೆಯುವ ಮುಖ್ಯ ಅವಯವವಿರುವದು. ನಾವು ತಿನ್ನುವ ಆಹಾರವು ಗಂಟಲದ ಕೊಳಿವೆಯ ಮಾರ್ಗವಾಗಿ ಅನ್ನಾಶಯದೊಳಗೆ ಹೋಗುವದು. ಅಲ್ಲಿ ಅದು ಹಿಟ್ಟಿನಂತಾಗಿ ಒಂದು ರಸದೊಳಗೆ ಕೂಡಿಹೋಗುವದು. ಪ್ಲೀಹವು ಕಣಕದಂತೆ ಮೆತ್ತಗಾಗಿರುವ ತುಸು ಊದಿಬಣ್ಣದ ಗಂಟು ಇರುವದು. ಇದು ಮಾಡುವ ಕಾರ್ಯವು ಗೊತ್ತಾಗಿಲ್ಲ. ಪಿತ್ತಾಶಯವು ಬಾದಾಮಿಯ ಬಣ್ಣದ ಅವಯವವಿರುವದು. ಶರೀರದಲ್ಲಿ ಎಲ್ಲಕ್ಕೂ ದೊಡ್ಡ ಮಾಂಸದ ಕರಣೆಯು ಇದೇ. ಪಿತ್ತವೆಂಬ ಹಸುರುಬಣ್ಣದ ರಸವನ್ನು ರಕ್ತದಿಂದ ಬೇರೆ ಮಾಡುವದೇ ಇದರ ಕಾರ್ಯವು. ಪಚನಕ್ರಿಯೆಯಲ್ಲಿ ಪಿತ್ತರಸದ ಕಾರ್ಯವೇ ಎಲ್ಲಕ್ಕೂ ಹೆಚ್ಚು ಮಹತ್ವವಾದದ್ದು. ಪಿತ್ತವು ಒಂದು ಚೀಲದಲ್ಲಿ ಸಂಚಯವಾಗಿ ಒಂದು ನಳಿಕೆಯಿಂದ ಬಂದು ಕರುಳಿನ ಮೇಲ್ಭಾಗದಲ್ಲಿ ಬೀಳುವದು. ನಿಮ್ಮಲ್ಲಿ ಯಾರಾದರೂ ಪಿತ್ತರಸವನ್ನು ನೋಡಿರುವಿರೋ?

ಕಮಲೆ—ಇಲ್ಲ; ಪಿತ್ತಾಶಯದಿಂದ ಹೊರಡುವ ಪಿತ್ತರಸವು ನಮಗೆ ಹ್ಯಾಗೆ ಕಂಡೀತು?

ಅ—ಬೇಸಿಗೆಯಲ್ಲಿ ಒಮ್ಮೊಮ್ಮೆ ನಾವು ಹಸುರುಬಣ್ಣದ ಕಹಿ ರಕ್ತವನ್ನು ಕಾರುವೆವು. ಆಗ ಪಿತ್ತರಸವು ಬಹಳ ಹೊರಡುವದುಂಟು.

ಕ—ಹೌದು, ನನ್ನ ತಂಗಿ ಸುಭದ್ರೆಯು ಅಂಥ ಪಿತ್ತವನ್ನೇ ನಿನ್ನೆ ವಾಂತಿಮಾಡಿಕೊಂಡಳು.

ಅ—ಕರುಳು ದೊಡ್ಡ ಕೊಳಿವೆಯಂತಿರುವವು. ಹಾಗು ಸುತ್ತು

ಸುತ್ತಾಗಿ ಹೊಟ್ಟೆಯ ಬಹಳ ಭಾಗದ ತುಂಬ ಹಬ್ಬಿರುವವು. ಇದು ಸುಮಾರು ಇಪ್ಪತ್ತೈದು ಫೂಟು ಉದ್ದವಿರುವದು. ಇದರ ಮೇಲಿನ ಭಾಗಕ್ಕೆ ಸಣ್ಣಕರುಳೆಂದೂ ಕೆಳಭಾಗಕ್ಕೆ ದೊಡ್ಡಕರುಳೆಂದೂ ಅನ್ನು ವರು. ಆಹಾರವು ಅನ್ನದ ಕೊಳವೆಯೊಳಗಿಂದ ಹಾಯ್ದು ಅನ್ನಾಶಯ ದಲ್ಲಿ ಹೋಗುವದೆಂದು ಹೇಳಿರುವೆನಷ್ಟೇ? ಅನ್ನಾಶಯದ ಸುತ್ತಲಿರುವ ಮಾಂಸದೊಳಗಿಂದ ಸೂಕ್ಷ್ಮವಾದ ನಳಗಳು ಒಳಗೆ ಬಂದಿರುವವು. ಇವು ಗಳೊಳಗಿಂದ ಒಂದು ಬಗೆಯ ಹುಳಿ ರಸವು ಬಂದು ಅನ್ನಾಶಯದಲ್ಲಿ ಬೀಳುವದು. ಉಪ್ಪು ಕಾರದ ಆಹಾರವನ್ನು ತಿಂದರೆ, ಹಾಗು ನಡು ನಡುವೆ ನೀರು ಕುಡಿದರೆ ಈ ರಸವು ಹೆಚ್ಚಾಗಿ ಹೊರಡುವದರಿಂದ ಪಚನ ಕ್ರಿಯೆಯು ಒತ್ತರದಿಂದ ನಡೆಯುವದು. ಇಂಥ ಪದಾರ್ಥಗಳನ್ನು ಬಹಳ ತಿಂದರೆ, ಅಥವಾ ನಡುನಡುವೆ ಬಹಳ ನೀರು ಕುಡಿದರೆ, ಈ ರಸವು ಕಡಿಮೆ ಹೊರಡುವದು. ಅನ್ನಾಶಯದಲ್ಲಿ ಈ ಹುಳಿರಸದ ಮೂಲಕ ನಾವು ಕುಡಿಯುವ ಹಾಲು ಮೊಸರಾಗುವದು. ಈ ಬಗ್ಗೆ ನಿಮಗೆ ಹಿಂದೆ ಹೇಳಿದ್ದೇನೆ. ಬಾಯಿಯಲ್ಲಿ ತುತ್ತನ್ನು ಹಾಕಿಕೊಂಡಕೂಡಲೆ ನೀವು ಏನು ಮಾಡುತ್ತೀರಿ?

ಸಾ—ಹಲ್ಲಿನಿಂದ ಅದನ್ನು ನುರಿಸಿ ಬಳಿಕ ನುಂಗುತ್ತೇವೆ.

ಆ—ನಾವು ಆಹಾರವನ್ನು ಹಲ್ಲಿನಿಂದ ಚೆನ್ನಾಗಿ ಅಗಿಯದಿದ್ದರೆ, ಅದನ್ನು ನುರಿಸುವ ಭಾರವು ಅನ್ನಾಶಯದ ಮೇಲೆ ಬೀಳುವದು. ಅದ ರಿಂದ ಅದು ಬಹಳ ದುಡಿಯಬೇಕಾಗುವದು. ಆದದರಿಂದ ನಾವು ಆಹಾರ ವನ್ನು ಚೆನ್ನಾಗಿ ನುರಿಸಿ ಹಿಟ್ಟಿನಂತೆ ಮಾಡಿದ ಬಳಿಕ ಅದನ್ನು ನುಂಗ ಬೇಕು. ಹಲ್ಲಿನಿಂದ ಆಹಾರವನ್ನು ನುರಿಸುತ್ತಿರುವಾಗ ನಾಲಿಗೆಯು ಜೊಲ್ಲು ಸುರಿಸಿ ಅದನ್ನು ಪಚನ ಮಾಡಲಿಕ್ಕೆ ತಕ್ಕದ್ದಾಗಿ ಮಾಡುವದು. ತುಣುಕುತುಣುಕಾಗಿ ನುಂಗಿದರೆ ಆಹಾರವು ಪಚನವಾಗಲಿಕ್ಕೆ ಕಷ್ಟ ವಾಗುವದು. ಅನ್ನಾಶಯದಲ್ಲಿ ಕರಗಿ ರಸವಾಗುವ ಆಹಾರವನ್ನು ರಕ್ತ

ವಾಹಿನಿಗಳು ಹೀರಿಕೊಳ್ಳುತ್ತವೆ. ತುಣುಕುತುಣುಕಾಗಿ ಕರುಳಿನೊಳಗೆ ಹೋಗುವ ಆಹಾರವು ಪಿತ್ತರಸ ಮೊದಲಾದ ರಸಗಳಿಂದ ಕೂಡಿ ರಕ್ತ ವಾಹಿನಿಗಳಿಂದ ಹೀರಿಕೊಳ್ಳಲಿಕ್ಕೆ ತಕ್ಕದ್ದಾಗುವದು. ಆಹಾರದ ಮಿಕ್ಕ ಭಾಗವು ದೊಡ್ಡಕರುಳಿನೊಳಗೆ ಹೋಗಿ ಅಲ್ಲಿ ಪಚನ ಹೊಂದಿ ರಕ್ತ ದೊಳಗೆ ಕೂಡುತ್ತದೆ. ಕೆಲಸಕ್ಕೆ ಬಾರದ ಭಾಗವು ಮಲರೂಪವಾಗಿ ದೇಹದಿಂದ ಹೊರಗೆ ಹೋಗುತ್ತದೆ.

---

## ೫೭ನೆಯ ಪಾಠ.

## ರೇಶಿಮೆ.

ಅಕ್ಕನವರು—ಸಾವಿತ್ರೀ, ನಿನ್ನ ಉಡುಪು ಯಾವ ಪದಾರ್ಥದಿಂದ ಆಗಿರುವದು? ಅದು ಯಾವ ಬಣ್ಣದ್ದಿರುವದು ?

ಸಾವಿತ್ರಿ—ಇದು ಕಿತ್ತಳೆಬಣ್ಣದ ರೇಶಿಮೆಯ ಸೀರೆಯು.

ಅ—ರೇಶಿಮೆಯು ಯಾತರಿಂದಾಗುತ್ತದೆ?

ಸರಸ್ವತಿ—ಒಂದು ತರದ ಸಣ್ಣ ಹುಳುಗಳಿಂದ ರೇಶಿಮೆಯು ಹೊರ ಡುತ್ತದೆಂದು ನೀವು ಒಮ್ಮೆ ಹೇಳಿರುವಿರಿ.

ಅ—ಹೌದು, ಈ ಹುಳುಗಳು ಪಾತರಗಿತ್ತಿಗಳಾಗಿ ಹಾರಾಡುವ ಹುಳು ಗಳ ಜಾತಿಯವಿರುತ್ತವೆ. ಈ ಹುಳುವು ಮೊದಲು ಕೋರೀಹುಳುವಿನಂತಿ ರುವದು. ಕೋರೀಗಿಡದ ಎಲೆಗಳನ್ನು ತಿಂದು ಬದುಕುವದು. ಬಳಿಕ ಸ್ವಲ್ಪ ಕಾಲದ ವರೆಗೆ ಇದು ನಿದ್ರಾವಸ್ಥೆಯಲ್ಲಿರುವದು. ಇದಕ್ಕೆ ಪಕ್ಕ ಗಳು ಬರುವವು. ಹಾಗು ಕೊನೆಗೆ ಪಾತರಗಿತ್ತಿಯಂಥ ಪಕ್ಕವುಳ್ಳ ಹುಳು ವಾಗುತ್ತದೆ. ಈ ಸ್ಥಿತಿಗೆ ಹೋಗುವ ಮೊದಲು ತನಗೆ ಯಾರಿಂದಲೂ ಉಪದ್ರವವಾಗದೆ ಸ್ವಸ್ಥವಾಗಿರಬೇಕೆಂದು ಅದು ಒಂದು ಮನೆ ಮಾಡಿ ಕೊಳ್ಳುತ್ತದೆ. ಜೇಡಹುಳುವು ತನ್ನ ಮೈಯೊಳಗಿಂದ ಎಳೆಯನ್ನು ತೆಗೆ ಯುವಂತೆ ರೇಶಿಮೆಯ ಹುಳುವು ಎಳೆಯನ್ನು ತೆಗೆಯುವದು. ಆದರೆ ಜೇಡ

ಹುಳುವಿನಂತೆ ಇದು ಜಾಳಿಗೆಯನ್ನು ಮಾಡಿ ಅದರಲ್ಲಿ ಬಿದ್ದ ಹುಳದ ಬೇಟೆಯಾಡಿ ಅದನ್ನು ಹಿಡಿಯುವದಿಲ್ಲ. ತನ್ನ ಮೈಸುತ್ತು ಸೂಕ್ಷ್ಮವಾದ ಎಳೆಗಳನ್ನು ಸುತ್ತಿಕೊಂಡು ಇರಲಿಕ್ಕೆ ಮನೆ ಮಾಡಿಕೊಳ್ಳುತ್ತದೆ. ಎಳೆಗಳಿಂದಾದ ಈ ಮನೆಗೆ ಕೋಶವೆನ್ನುತ್ತೇವೆ. ಎಳೆಗಳಿಗೆ ರೇಶಿಮೆಯೆನ್ನುತ್ತೇವೆ.



ಸಾ—ಅಕ್ಕನವರೇ, ಆ ಕೋಶದಿಂದ ಬಗೆಬಗೆಯ ಬಣ್ಣದ ರೇಶಿಮೆಯು ಹ್ಯಾಗೆ ಹೊರಡುವದು ?

ಅ—ಕೋಶದಿಂದ ರೇಶಿಮೆ ತೆಗೆಯಬೇಕಾದರೆ ಮೇಲಿನ ಪದರನ್ನು ಮೊದಲು ಬೇರೆ ಬಿಡಿಸಬೇಕಾಗುತ್ತದೆ. ಇದಕ್ಕಾಗಿ ಅವುಗಳನ್ನು ಕುದಿ

ಯುವ ನೀರಲ್ಲಿ ಇಡುತ್ತಾರೆ. ಆ ಮೇಲೆ ಒಳಭಾಗದಲ್ಲಿರುವ ಎಳೆಗಳನ್ನು ಬಿಡಿಸಿ ಸುತ್ತಿ ಉಂಡಿಗಳನ್ನು ಮಾಡುತ್ತಾರೆ. ಇಂಥ ರೇಶಿಮೆಗೆ ಕಚ್ಚಾ ರೇಶಿಮೆಯನ್ನುವರು. ಕಚ್ಚಾ ರೇಶಿಮೆಯು ಪರದೇಶಗಳಿಂದ ಬರುವದು. ಮುಂಬಯಿ ಇಲಾಖೆಯಲ್ಲಿ ರೇಶಿಮೆಯ ಹುಳುಗಳನ್ನು ಬೆಳಿಸುವದಿಲ್ಲ. ಈ ಕೆಲಸವು ಈಗ ಮೈಸೂರುಸೀಮೆಯಲ್ಲಿ ನಡೆಯುತ್ತದೆ. ಆದದರಿಂದ ಅಲ್ಲಿ ಲಕ್ಷಗಟ್ಲೆ ಕೋರೀಗಿಡಗಳನ್ನು ಹಚ್ಚಬೇಕಾಗುತ್ತದೆ. ಚೀನದ ರೇಶಿಮೆಯನ್ನು ಸುರತ, ಠಾಣೆ, ಅಹಮ್ಮದಾಬಾದಗಳ ಕಾರಖಾನೆಗಳಲ್ಲಿಯೂ, ಇರಾಣದ ರೇಶಿಮೆಯನ್ನು ನಾಸಿಕದ ಕಾರಖಾನೆಗಳಲ್ಲಿಯೂ ಉಪಯೋಗಿಸುತ್ತಾರೆ. ಇವಲ್ಲದೆ ಇನ್ನೂ ಕೆಲವು ದೇಶಗಳಿಂದ ರೇಶಿಮೆಯು ಬರುತ್ತದೆ. ಅದನ್ನು ನಮ್ಮ ಇಲಾಖೆಯ ಬೇರೆ ಭಾಗಗಳಲ್ಲಿ ಉಪಯೋಗಿಸುತ್ತಾರೆ. ಕಚ್ಚಾ ರೇಶಿಮೆಯು ಸ್ವಲ್ಪ ಹಳದೀ ಬಣ್ಣದ ಮೇಲಿರುತ್ತದೆ. ಅದನ್ನು ಮೊದಲು ಸ್ವಚ್ಛವಾಗಿ ತೊಳೆಯುವರು; ಬಳಿಕ ಅದಕ್ಕೆ ಬೇರೆ ಬೇರೆ ಬಣ್ಣಗಳನ್ನು ಕೊಡುವರು.

ಸ—ಒಂದು ಕೋಶದಿಂದ ಎಷ್ಟು ರೇಶಿಮೆಯು ಹೊರಡುವದು?

ಆ—ಕೋಶದಲ್ಲಿ ಒಂದೇ ಉದ್ದವಾದ ಎಳೆಯಿರುವದು. ಅದನ್ನು ಒಳಗಡೆಯಿಂದ ಜಾಣತನದಿಂದ ಬಿಚ್ಚಿಕೊಂಡರೆ ತೊಡಕು ಬೀಳದಂತೆ ಎಳೆಯನ್ನು ತೆಗೆಯಬಹುದು. ಎಳೆಗಳು ೬೦೦ರಿಂದ ೧೫೦೦ಯಾರ್ಡು ಉದ್ದವಿರುವದುಂಟು. ಅವು ಬಹಳ ಜಿನುಗಾಗಿರುವದರಿಂದ, ನೇಯುವ ಕೆಲಸಕ್ಕೂ ಕಸೂತಿಗೂ ಉಪಯೋಗಿಸಬೇಕಾದರೆ ಅಂಥ ಎರಡು ಇಲ್ಲವೆ ಮೂರು ಎಳೆಗಳನ್ನು ಹೊಸೆದುಕೊಳ್ಳಬೇಕಾಗುವದು. ರೇಶಿಮೆಯ ಬಟ್ಟೆಗಳು ಹಲವು ತರದವಿರುತ್ತವೆ. ನಮ್ಮ ದೇಶದಲ್ಲಿ ಬಹುತರ ಕಟ್ಟಿಗೆಯಿಂದ ಮಾಡಿದ ಕೈಮಗ್ಗಗಳ ಮೇಲೆ ಇವುಗಳನ್ನು ನೇಯುತ್ತಾರೆ. ಆದರೆ ಯುರೋಪದಲ್ಲಿ ಉಗಿಯ ಶಕ್ತಿಯಿಂದ ನಡೆಯುವ ಕಬ್ಬಿಣದ ಅಥವಾ ಉಕ್ಕಿನ ಯಂತ್ರಗಳಿಂದ ನೇಯುತ್ತಾರೆ. ರೇಶಿಮೆಯ ದಾರ

ದಲ್ಲಿ ನೂಲಿನ ದಾರವನ್ನಾಗಲಿ ಜರದ ಎಳೆಗಳನ್ನಾಗಲಿ ಕೂಡಿಸಿ ಬಟ್ಟೆಗಳನ್ನು ನೇಯುತ್ತಾರೆ. ಜರದಿಂದ ಕೂಡಿದ ರೇಶಿಮೆಯ ಪೀತಾಂಬರಗಳು ಬಹಳ ಬೆಲೆ ಬಾಳುತ್ತವೆ. ಕಣ್ಣಿಗೂ ಅಂದವಾಗಿರುತ್ತವೆ. ಹಣವುಳ್ಳವರೂ ಘನವಂತರೂ ತರತರದ ರೇಶಿಮೆಯ ಬಟ್ಟೆಗಳನ್ನು ಧರಿಸುವರು. ಅವರಿಗೆ ಈ ಬಟ್ಟೆಗಳಿಂದ ಬಹಳ ಉಪಯೋಗವಾಗುತ್ತದೆ. ಅವು ಹಗುರಾಗಿಯೂ ಮಿದುವಾಗಿಯೂ ಅಂದವಾಗಿಯೂ ಇರುವವಲ್ಲದೆ ಬೆಚ್ಚಗೂ ಇರುತ್ತವೆ; ಹಾಗೂ ಬಹಳ ದಿವಸ ಬಾಳುತ್ತವೆ.

---

## ೫೮ನೆಯ ಪಾಠ.

## ಹತ್ತಿ.

ಅಕ್ಕನವರು—ನಿನ್ನೆ ನಾವು ರೇಶಿಮೆಯ ಬಗ್ಗೆ ಕಲಿತೆವು. ರೇಶಿಮೆಯು ಪ್ರಾಣಿಜ ಪದಾರ್ಥವು. ನಾವು ಬಟ್ಟೆಗಳನ್ನು ಮಾಡುವ ಮತ್ತೊಂದು ಪ್ರಾಣಿಜ ಪದಾರ್ಥವು ಉಣ್ಣೆಯು. ಅದರ ಬಗ್ಗೆ ನೀವು ಹಿಂದಿನ ಪುಸ್ತಕದಲ್ಲಿ ಕೆಲವು ಸಂಗತಿಗಳನ್ನು ಕಲಿತಿರುವಿರಿ. ಕೆಲವು ವನಸ್ಪತಿಗಳಿಂದ ಹುಟ್ಟುವ ಪದಾರ್ಥಗಳಿಂದಲೂ ಬಟ್ಟೆಗಳನ್ನು ಮಾಡುತ್ತಾರೆ. ಇವುಗಳಲ್ಲಿ ಹತ್ತಿಯು ಮುಖ್ಯವಾದದ್ದು. ನೀವೆಲ್ಲರು ಹತ್ತಿಯನ್ನು ನೋಡಿರುವಿರಿ. ಅದು ಯಾತರಿಂದ ಬರುವದು?



ಸಾವಿತ್ರಿ—ಹೌದು; ಇದು ಹತ್ತಿಯ ತೊಳೆಗಳಿಂದ ಬರುವದು. ಹತ್ತಿಯ ಕಾಯಿಗಳು ಕೆಲವು ತರದ ಸಣ್ಣ ಗಿಡಗಳಿಗೆ ಆಗುತ್ತವೆ.

ಅ—ಹತ್ತಿಯು ಹುಟ್ಟುವ ಭಾಗಕ್ಕೆ ಹತ್ತಿಯ ಗಿಡದ ಕಾಯಿ ಯೆನ್ನುವರು. ಗಿಡಕ್ಕೆ ಮೊದಲು ಅರಿಸಿನ ಬಣ್ಣದ ಹೂಗಳೂ ಬಳಿಕ ಅವುಗಳಿಂದ ಕಾಯಿಗಳೂ ಆಗುತ್ತವೆ. ಕಾಯಿಗಳು ಬಲಿತು ಒಡೆದವೆಂದರೆ ಹತ್ತಿಯು ತೊಳೆಗಳು ಹೊರಬೀಳುತ್ತವೆ. ಹತ್ತಿಯ ತೊಳೆಗಳಿಗೂ ಅರಳೆಗೂ ಭೇದವೇನು ?



ಸರಸ್ವತಿ—ಹತ್ತಿಯ ತೊಳೆಗಳೊಳಗಿಂದ ಕಾಳುಗಳನ್ನು ತೆಗೆದುಬಿಟ್ಟರೆ ಉಳಿಯುವದೇ ಅರಳೆಯು.

ಅ—ನೀನು ಹೇಳಿದ್ದು ನಿಜವು. ಕಾಳು ಕಳೆದ ಹತ್ತಿಗೆ "ಅರಳೆ" ಎನ್ನುವರು. ಹಿಂದೆ ಹತ್ತಿಯ ಕಾಳನ್ನು ಕೈಲಿ ನಡಿಸುವ ಯಂತ್ರಗಳಿಂದ ಬಿಡಿಸುತ್ತಿದ್ದರು. ಆದರೆ ಇತ್ತಲಾಗಿ ಆ ಕೆಲಸವನ್ನು ದೊಡ್ಡ ಯಂತ್ರಗಳಿಂದ ಮಾಡುವರು. ಇವುಗಳಿಗೆ "ಜಿನ್" ಎಂಬ ಹೆಸರು. ನಿಮ್ಮಲ್ಲಿ ಯಾರಾದರೂ ಜಿನ್ನನ್ನು ನೋಡಿರುವಿರೋ?

ರಂಗು—ನಾನು ನೋಡಿದ್ದೇನೆ. ಒಂದು ದಿನ ನಮ್ಮ ಅಪ್ಪನು ಊರ ಹೊರಗಿರುವ ಗಿರಣಿಯನ್ನು ತೋರಿಸುವದಕ್ಕಾಗಿ ನನ್ನನ್ನು ಕರಕೊಂಡು ಹೋಗಿದ್ದನು. ಹತ್ತೀ ಅರೆಯುವ ಕಾರಖಾನೆಗಳಲ್ಲಿ ಬಹಳ ಗಿರಣಿಗಳಿದ್ದವು. ಅವೆಲ್ಲ ಉಗಿಯ ಶಕ್ತಿಯಿಂದ ನಡೆಯುತ್ತಿದ್ದವು.

ಅ—ಈ ಕಾರಖಾನೆಗಳಲ್ಲಿ ಕಬ್ಬಿಣದ ಆಯುಧಗಳಿಂದ ಅರಳೆಯನ್ನೂ ಕಾಳನ್ನೂ ಬೇರೆ ಮಾಡಿದ ಬಳಿಕ ಅರಳೆಯನ್ನು ಹಿಂಜಬೇಕಾಗುವದು. ಗಾದಿಗಳನ್ನು ಮಾಡಿಸುವಾಗ ನಾವು ಪಿಂಜಾರನಿಂದ ಅರಳೆಯನ್ನು ಹಸನಮಾಡಿಸುತ್ತೇವೆ. ಹಿಂಜುವದರಿಂದ ಹತ್ತಿಯು ಕಸರು ಬೇರೆ

ಯಾಗುವದು, ಹಾಗು ಎಳೆಗಳು ದೂರ ದೂರಾಗುವವು. ಇಗೋ ಇಲ್ಲಿರುವ ಹಸನ ಮಾಡಿದ ಹಾಗು ಹಸನ ಮಾಡದಿದ್ದ ಅರಳೆಯ ಮಾದರಿಗಳನ್ನು ನೋಡಿರಿ. ಹಿಂದೆ ಅರಳೆಯನ್ನು ಹಿಂಜಿ ಹಂಜಿಗಳನ್ನು ಮಾಡಿಕೊಳ್ಳುತ್ತಿದ್ದರು. ಇವುಗಳನ್ನು ರಾಟಿಯ ಮೇಲೆ ನೂಲುತ್ತಿದ್ದರು. ಕೆಲವು ಸ್ಥಳಗಳಲ್ಲಿ ರಾಟಿಯಿಂದಲೇ ಈಗಲೂ ಅರಳೆಯನ್ನು ನೂಲುವರು. ಆದರೆ ಇತ್ತಲಾಗಿ ಯಂತ್ರಗಳ ಮೇಲೆ ನೆಯ್ದ ಬಟ್ಟೆಗಳನ್ನು ಜನರು ಬಹಳ ಉಪಯೋಗಿಸುವರು. ನಮ್ಮ ದೇಶದಲ್ಲಿ ನೂಲುವ ಹಾಗೂ ನೇಯುವ ಹಲವು ಕಾರಖಾನೆಗಳು ಇರುವವು. ನೀವೆಲ್ಲರೂ ಇವುಗಳನ್ನು ನೋಡಿರಬಹುದು.

ಕಮಲೆ—ನಮ್ಮ ಸೋದರಮಾವನು ಒಂದು ಕಾರಖಾನೆಯಲ್ಲಿ ಕೆಲಸ ಮಾಡುವನು. ಅದನ್ನು ನೋಡಲಿಕ್ಕೆ ನಾನು ಮೇಲಿಂದ ಮೇಲೆ ಹೋಗುತ್ತೇನೆ. ಆ ಕಾರಖಾನೆಯಲ್ಲಿ ನಡೆಯುವ ಎಲ್ಲತರದ ಕೆಲಸಗಳನ್ನು ಆತನು ನನಗೆ ತೋರಿಸುವನು.

ಅ—ಹಾಗಾದರೆ ಹತ್ತಿಯನ್ನು ಕಾರಖಾನೆಗೆ ಒಯ್ದು ಬಳಿಕ ಏನೇನು ಮಾಡುವರೆಂಬದನ್ನು ನೀನು ಹೇಳು.

ಕ—ಅರೆದ ಹತ್ತಿಯನ್ನು ಮೊದಲು ಗಡುತರವಾದ ಲಡಿ ಮಾಡುತ್ತಾರೆ. ಬರಬರುತ್ತಾ ಅವು ಸಣ್ಣಾಗುತ್ತವೆ. ಬಳಿಕ ಅವುಗಳನ್ನು ನೂಲುವರು. ಹಾಗು ಬಟ್ಟೆಯನ್ನು ನೇಯುವರು.

ಅ—ಹೌದು, ನೂಲು ಜಿನುಗಿದ್ದಂತೆ ಅದರಿಂದ ಮಾಡುವ ಬಟ್ಟೆಗಳು ನಯವಾಗಿರುತ್ತವೆ. ನಯವಾದ ನೂಲು ತೆಗೆಯಲಿಕ್ಕೆ ಮೇಲ್ತರದ ಹತ್ತಿಯು ಬೇಕು. ಉದ್ದನ್ನ ಎಳೆಗಳುಳ್ಳ ಹತ್ತಿಯು ಮೇಲ್ತರದ್ದೆನಿಸುವದು. ನಮ್ಮ ದೇಶದಲ್ಲಿ ನವಸರಿಯಲ್ಲಿ ಹೊರಡುವ ಹತ್ತಿಯು ಉತ್ತಮವಾದದ್ದೆಂದು ಎಣಿಸಲ್ಪಟ್ಟಿರುವದು. ಗುಜರಾಥದಲ್ಲಿ "ನಾರಮೋ" ಎಂಬ ಹತ್ತಿಯು ಬೆಳೆಯುವದು. ಇದಕ್ಕೆ ದೇವಕಾಪಸವೆನ್ನುವರು. ಇದಕ್ಕಾ

ಧರೂ ಮೇಲ್ತರದ ಹತ್ತಿಯೆಂದೆನ್ನುವರು. ಆದರೆ ಇದು ತೀರ ಸ್ವಲ್ಪ ಬೆಳೆಯುವದು. ಮಲಮಲದಂಥ ಜಿನುಗು ಅರಿವೆಯನ್ನು ನೆಯ್ಯಲಿಕ್ಕೆ ಮೇಲ್ತರದ ಹತ್ತಿಯು ಬೇಕು. ಒಳ್ಳೆಯದು, ನಮ್ಮ ದೇಶದಲ್ಲಿ ಹತ್ತಿಯಿಂದ ಬಟ್ಟೆಗಳನ್ನು ಯಾರು ಮಾಡುವರು?

ಸಾ—ನೇಕಾರರು ಮಾಡುವರು.

ಅ—ನೇಕಾರರು ಹಲವು ಜಾತಿಯವರಿರುವರು. ಇವರೆಲ್ಲ ಕೈಮಗ್ಗಗಳ ಮೇಲೆ ಬಟ್ಟೆಗಳನ್ನು ನೇಯುವರು. ಆದರೆ ಇತ್ತಲಾಗಿ ಕಾರಖಾನೆಗಳಲ್ಲಿ ಬಹಳ ಬಟ್ಟೆಗಳು ತಯಾರಾಗುತ್ತವೆ. ಒಂದೊಂದು ಕಾರಖಾನೆಯಲ್ಲಿ ಸಾವಿರಾರು ಮಗ್ಗಗಳಿರುವವು. ಇವೆಲ್ಲ ಉಗಿಯ ಶಕ್ತಿಯಿಂದ ನಡೆಯುವವು. ಒಮ್ಮೊಮ್ಮೆ ನೂಲು ಹರಿಯುವದು. ಆಗ ಅವುಗಳನ್ನು ಕೂಡಿಸಲಿಕ್ಕೆ ಒಬ್ಬ ಮನುಷ್ಯನು ಅಲ್ಲಿ ನಿಂತಿರುವನು. ನಮ್ಮ ದೇಶದಲ್ಲಿ ಹತ್ತಿಯ ಬಟ್ಟೆಗಳನ್ನು ಬಹುತರವಾಗಿ ಎಲ್ಲರೂ ಉಪಯೋಗಿಸುವರು. ಹತ್ತಿ ಯಂತೆ ನಾರಾದರೂ ವನಸ್ಪತಿಗಳಿಂದ ಬರುವದು. ನಾರಿನ ಗಿಡಗಳ ತೊಗಟೆಯಿಂದ ಎಳೆಗಳನ್ನು ತೆಗೆದು ಅದರಿಂದಲೂ ಬಟ್ಟೆಗಳನ್ನು ನೇಯು ವರು. ಆದರೆ ಅವು ನಯವಾಗಿರುವದಿಲ್ಲ.

---

### ೫೯ನೆಯ ಪಾಠ.

### ಬಟ್ಟೆಗಳು. (ಭಾಗ ೧.)

ಅಕ್ಕನವರು—ಮಕ್ಕಳಿರಾ, ಪಶುಗಳು ನಮ್ಮಂತೆ ಬಟ್ಟೆಗಳನ್ನು ಯಾಕೆ ಧರಿಸುವದಿಲ್ಲ?

ಪಾರ್ವತಿ—ಅವುಗಳಿಗೆ ಬಟ್ಟೆಗಳನ್ನು ಯಾರು ಮಾಡಿಕೊಡುವರು?

ಅ—ಬಟ್ಟೆಗಳನ್ನು ಮಾಡಿಕೊಳ್ಳಲಿಕ್ಕೆ ಅವುಗಳಿಗೆ ಬರುತ್ತದೆಂದು ತಿಳಿಯೋಣ; ಇಲ್ಲವೆ ಯಾರಾದರೂ ಮಾಡಿಕೊಡುವರೆಂದು ಕಲ್ಪಿಸೋಣ; ಅವುಗಳಿಗೆ ಬಟ್ಟೆಗಳು ಬೇಕಾಗುತ್ತವೆಯೋ?

ಅಂಬೆ—ಬಹಳ ಚಳಿ ಬಿದ್ದಾಗ ನಮ್ಮ ಎತ್ತಿನ ಮೇಲೆ ಅರಿವೆಯನ್ನು ಹೊಚ್ಚುತ್ತೇವೆ.

ಅ—ತಂಗೀ, ನೀನು ಹೇಳಿದ್ದು ನಿಜವು; ಆಕಳು, ಎತ್ತು, ಕುದುರೆ ಮೊದಲಾದ ಪಶುಗಳನ್ನು ಸಾಕಿದವರು ಬಹಳ ಚಳಿ ಬಿದ್ದಾಗ ಅವುಗಳ ಮೈಮೇಲೆ ಅರಿವೆಗಳನ್ನು ಹೊಚ್ಚುವರು. ಆದರೆ ಬಹುಶಃ ಪಶುಗಳಿಗೆ ಬಟ್ಟೆಗಳು ಬೇಕಾಗುವದಿಲ್ಲ. ಬಟ್ಟೆಗಳಿಲ್ಲದಿದ್ದರೂ ಅವುಗಳಿಗೆ ನಡೆಯುವದು. ಕಾಡ ಪಶುಗಳು ಬಟ್ಟೆಗಳಿಲ್ಲದೆ ಅಡವಿಗಳಲ್ಲಿ ಸಂಚರಿಸುವವಷ್ಟೇ? ಅವುಗಳಿಗೆ ಬಟ್ಟೆಗಳು ಯಾಕೆ ಬೇಕಾಗುವದಿಲ್ಲ?

ರಾಧೆ—ಅವುಗಳ ಮೈಮೇಲೆ ಕೂದಲಾಗಲಿ ಉಣ್ಣೆಯಾಗಲಿ ಇರುವದು.

ಅ—ಹೌದು; ಅವುಗಳ ಮೈಮೇಲೆ ಕೂದಲಾಗಲಿ ಉಣ್ಣೆಯಾಗಲಿ ದಟ್ಟವಾಗಿ ಹಬ್ಬಿರುವದು. ಇಷ್ಟೇ ಅಲ್ಲ, ಅವುಗಳ ಚರ್ಮವು ನಮ್ಮ ಚರ್ಮಕ್ಕಿಂತ ದಪ್ಪವಿರುವದು. ಬಿಸಿಲು-ಚಳಿ-ಮಳೆಗಳಿಂದ ಸುರಕ್ಷಿತವಾಗಿರುವಂತೆ ದೇವರು ಅವುಗಳ ಶರೀರವನ್ನು ಮಾಡಿರುವನು. ಇಂಥ ರಕ್ಷಣವನ್ನು ದೇವರು ಮನುಷ್ಯನ ಶರೀರಕ್ಕೆ ಕೊಟ್ಟಿಲ್ಲ. ಇದಕ್ಕೆ ಬದಲಾಗಿ ಮನುಷ್ಯನಿಗೆ ಬುದ್ಧಿಯೆಂಬ ಬಲವಾದ ಸಾಧನವನ್ನು ಕೊಟ್ಟಿರುವನು. ಇದರ ಸಹಾಯದಿಂದ ಮನುಷ್ಯನು ರಕ್ಷಣೋಪಾಯಗಳನ್ನು ದೊರಕಿಸುವನು. ಪ್ರಾಚೀನ ಕಾಲದಲ್ಲಿ ಮನುಷ್ಯನು ಪಶುಗಳ ಚರ್ಮಗಳನ್ನು ಹೊದ್ದುಕೊಂಡು ತನ್ನ ಶರೀರಕ್ಕೆ ತೇವು-ಚಳಿ-ಬಿಸಿಲುಗಳಿಂದಾಗುವ ಬಾಧೆಯನ್ನು ತಪ್ಪಿಸಿಕೊಳ್ಳುತ್ತಿದ್ದನು. ಕಾಲಾಂತರದಲ್ಲಿ ಅವನು ಉಣ್ಣೆ, ರೇಶಿಮೆ, ನಾರು ಮೊದಲಾದ ಪದಾರ್ಥಗಳಿಂದ ಬಟ್ಟೆಗಳನ್ನು ಮಾಡುವದನ್ನು ಗೊತ್ತುಹಚ್ಚಿದನು. ತೇವು-ಚಳಿ-ಬಿಸಿಲುಗಳಿಂದ ರಕ್ಷಿಸಿಕೊಳ್ಳಲಿಕ್ಕೆ ಮನುಷ್ಯನು ಬಟ್ಟೆಗಳನ್ನು ಧರಿಸುವನೆಂದು ಮೊದಲು ಹೇಳಿದ್ದೇನೆ; ಇದರ ಹೊರತು ಬೇರೆ ಯಾವ ಕಾರಣಗಳಿಂದ ಅವನು ಬಟ್ಟೆಗಳನ್ನು ಹಾಕಿಕೊಳ್ಳುವನು?

ನರ್ಮದೆ—ಬಟ್ಟೆಗಳಿಂದ ಮನುಷ್ಯನು ಚೆಂದ ಕಾಣುವನು.

ಅ—ಹೌದು; ಮನುಷ್ಯನು ಚೆಂದ ಕಾಣಬೇಕೆಂದು ಬಟ್ಟೆಗಳನ್ನು ತೊಡುವನು. ತರತರದ ಬಣ್ಣಗಳ ಹಾಗು ಜರತಾರಿಯ ಬಟ್ಟೆಗಳನ್ನು ಜನರು ಚೆಂದದ ಸಲುವಾಗಿಯೇ ಹಾಕುವರು; ಬಟ್ಟೆಗಳು ನಮ್ಮನ್ನು ತೇವು-ಚಳಿ-ಬಿಸಿಲುಗಳಿಂದಷ್ಟೇ ರಕ್ಷಿಸುವದಿಲ್ಲ; ಬೇರೆ ಮಾರ್ಗಗಳಿಂದಲೂ ರಕ್ಷಿಸುವವು. ನಾವು ಕಂಟಿಗಳೊಳಗಿಂದ ಹಾಯ್ದು ಹೋಗುವಾಗ ನಮ್ಮ ಶರೀರಕ್ಕೆ ಅಪಾಯವಾಗದಂತೆ ಬಟ್ಟೆಗಳು ರಕ್ಷಿಸುವವು. ಬಟ್ಟೆಗಳಿಲ್ಲದಿದ್ದರೆ ಗಾಳಿಯಿಂದೇಳುವ ಧೂಳಿಯಿಂದ ನಮ್ಮ ಶರೀರವು ಹೊಲಸಾಗುವದು. ಬಟ್ಟೆಗಳನ್ನು ಧರಿಸಲಿಕ್ಕೆ ಇನ್ನೂ ಬೇರೆ ಕಾರಣಗಳು ನಿಮಗೆ ಗೊತ್ತು ಇವೆಯೋ?

ರಂಗು—ಅಕ್ಕನವರೇ, ಬೇರೆ ಯಾವ ಕಾರಣವಿರುವದು?

ಅ—ಮಾನಮರ್ಯಾದೆಗಳನ್ನು ಕಾಯ್ದುಕೊಳ್ಳಲಿಕ್ಕೆ ನಾವು ಬಟ್ಟೆಗಳನ್ನು ಧರಿಸುವೆವು. ಸಣ್ಣ ಹುಡುಗರು ಬತ್ತಲೆ ಓಡಾಡಿದರೆ ನೆಟ್ಟಗೆ ಕಾಣುವದಿಲ್ಲ. ಪರಕಾರವನ್ನು ಉಟ್ಟುಕೊಳ್ಳದೆ ಬರೇ ಕುಪ್ಪಸವನ್ನಾಗಲಿ, ಅಂಗಿಯನ್ನಾಗಲಿ ತೊಟ್ಟುಕೊಳ್ಳುವ ಹುಡುಗೆಯು ಬಹಳ ಅಂದಗೇಡಿಯಾಗಿ ಕಾಣಿಸುತ್ತದೆ. ನಿನ್ನ ಸೆರಗು ಜರೆದಿದ್ದಾಗ ದೊಡ್ಡವರು ಯಾರಾದರೂ ಬಂದರೆ, ನಿಮ್ಮ ಅವ್ವ ನಿನಗೆ ಸೆರಗು ನೆಟ್ಟಗೆ ಹೊದ್ದುಕೊಳ್ಳಲಿಕ್ಕೆ ಹೇಳುವಳು. ಇದರ ಕಾರಣವೇನು?

ಪಾ—ಮರ್ಯಾದೆಗೋಸ್ಕರ ಅವ್ವನು ಹಾಗೆನ್ನುವಳು.

ಅ—ಇನ್ನು ಬಟ್ಟೆಗಳನ್ನು ಹೊರುವದರ ನಾಲ್ಕನೆಯ ಕಾರಣವನ್ನು ನಾನು ಹೇಳುವೆನು. ಇದು ಎಲ್ಲಕ್ಕೂ ಮಹತ್ವವಾದ ಕಾರಣವು. ನಮ್ಮ ಶರೀರದ ಸ್ವಾಭಾವಿಕ ಉಷ್ಣತೆಯನ್ನು ಕಾಯ್ದುಕೊಳ್ಳಲಿಕ್ಕೆ ಬಟ್ಟೆಗಳು ಅತ್ಯವಶ್ಯವಾದವುಗಳು. ಈ ಉಷ್ಣತೆಯು ಬಹಳ ಹೆಚ್ಚಾದರೆ ಅಥವಾ ಬಹಳ ಕಡಿಮೆಯಾದರೆ ನಮ್ಮ ದೇಹಕ್ಕೆ ಕೇಡಾಗುವದು. ಈಗ ಹೊತ್ತಾಯಿತು, ಹೆಚ್ಚಿನದನ್ನು ನಾಳೆ ಹೇಳುವೆನು.

## ೬೦ನೆಯ ಪಾಠ.

## ಬಟ್ಟೆಗಳು. ( ಭಾಗ ೨. )

ಅ—ಬಟ್ಟೆಗಳನ್ನು ತೊಟ್ಟು ನಮ್ಮ ಶರೀರದ ಉಷ್ಣತೆಯನ್ನು ಕಾಯ್ದುಕೊಳ್ಳುವ ಬಗ್ಗೆ ನಿನ್ನೆ ಹೇಳಿದೆನು. ಚಳಿಗಾಲದಲ್ಲಿ ಸುತ್ತಲಿರುವ ಹವೆಯು ತಂಪಾಗಿರುವದು. ಅಂದರೆ ನಮ್ಮ ದೇಹದ ಉಷ್ಣತೆಗಿಂತ ಹವೆಯ ಉಷ್ಣತೆಯು ಕಡಿಮೆಯಿರುವದು. ಹವೆಯು ತಂಪಾಗಿದ್ದರೆ ನಮ್ಮ ಶರೀರದ ಉಷ್ಣತೆಯು ಹವೆಯಲ್ಲಿ ಹೋಗುವದು. ಈ ಕೈವಸ್ತ್ರವನ್ನು ಮುಟ್ಟಿ ಇದು ಹ್ಯಾಗೆ ಹತ್ತುತ್ತದೆಂಬದನ್ನು ಹೇಳು.

ರಂ—ಇದು ತಣ್ಣಗೆ ಹತ್ತುತ್ತದೆ.

ಅ—ಹೌದು; ಈ ಕೆಂಡಕ್ಕೆ ಹಿಡಿದು ಇದನ್ನು ಬಿಸಿ ಮಾಡುತ್ತೇನೆ. ಈಗ ಇದನ್ನು ಮುಟ್ಟಿ ನೋಡು.

ರಂ—ಇದು ಈಗ ಬೆಚ್ಚಗೆ ಹತ್ತುತ್ತದೆ.

ಅ—ಒಳ್ಳೆಯದು; ಇನ್ನು ಇದನ್ನು ಈ ಗೂಟಕ್ಕೆ ಇಡುವೆನು. ಸ್ವಲ್ಪ ಹೊತ್ತಾದ ಬಳಿಕ ಇದನ್ನು ನೋಡೋಣ. ಬೇಸಿಗೆಯಲ್ಲಿ ಸುತ್ತಲಿರುವ ಹವೆಯು ಉಷ್ಣವಿರುವದರಿಂದ ಅದರ ಉಷ್ಣತೆಯು ನಮ್ಮ ಶರೀರವನ್ನು ಸೇರುವದು. ಆದರೆ ಮಳೆಗಾಲದಲ್ಲಿ ಬಹಳ ತಂಪಿರುವದರಿಂದ ನಮ್ಮ ಶರೀರದ ಉಷ್ಣತೆಯು ಸುತ್ತಲಿರುವ ಹವೆಯಲ್ಲಿ ಸೇರುವದು. ಚಳಿಗಾಲದಲ್ಲಿಯೂ ಮಳೆಗಾಲದಲ್ಲಿ ಬಹಳ ತಂಪಿರುವಾಗಲೂ ನಾವು ಬಟ್ಟೆಗಳನ್ನು ಹಾಕಿಕೊಳ್ಳದಿದ್ದರೆ ನಡುಗಬೇಕಾಗುತ್ತದೆ. ಆದರೆ ಬೇಸಿಗೆಯಲ್ಲಿ ಬಟ್ಟೆಗಳನ್ನು ತೊಡದಿದ್ದರೆ, ನಮಗೆ ಬಹಳ ಸೆಕೆಯೆನಿಸುವದು. ನಾವು ಚಳಿಯಿಂದ ನಡುಗುವಾಗ ನಮ್ಮ ಶರೀರದ ಉಷ್ಣತೆಯು ಹೊರಗೆ ಹೋಗುವದು. ಹಾಗು ಬೇಸಿಗೆಯಲ್ಲಿ ನಮಗೆ ಸೆಕೆಯೆನಿಸುವಾಗ ಸುತ್ತಲಿರುವ ಉಷ್ಣ ಹವೆಯು ನಮ್ಮ ಶರೀರದಲ್ಲಿ ಹೋಗಲಿಕ್ಕೆ ಹವಣಿಸುವದು. ಈಗ ಆ ಕೈವಸ್ತ್ರವನ್ನು ತಕ್ಕೊ.

ರಂ—ಇದು ಈಗ ತಣ್ಣಗಾಗಿದೆ.

ಅ—ಪಾರ್ವತೀ, ಇದು ಯಾಕೆ ತಣ್ಣಗಾಯಿತು ?

ಪಾ—ಅದರೊಳಗಿನ ಉಷ್ಣತೆಯು ಹೋದದರಿಂದ ಅದು ತಣ್ಣಗಾಯಿತು.

ಅ—ಅದರೊಳಗಿನ ಉಷ್ಣತೆಯು ಯಾಕೆ ಹೋಯಿತು? ಎಲ್ಲಿ ಹೋಯಿತು ?

ಪಾ—ಅದು ಸುತ್ತಲಿನ ಹವೆಯೊಳಗೆ ಹೋಯಿತು. ಹವೆಯು ಆ ಕೈವಸ್ತ್ರಕ್ಕಿಂತ ತಂಪಾಗಿರುವದರಿಂದ ಅದು ಕೈವಸ್ತ್ರದ ಉಷ್ಣತೆಯನ್ನು ಹೀರಿಕೊಂಡಿತು.

ಅ—ಪಾರ್ವತಿಯು ಹೇಳಿದ್ದು ನಿಜವು. ಕಾಯ್ದ ಸುವಟನ್ನು ತುಸು ಹೊತ್ತು ಇಟ್ಟರೆ ತಣ್ಣಗಾಗುವದು. ತಣ್ಣಗಿನ ಕಾಳನ್ನು ಬಿಸಿಲಿನಲ್ಲಿ ಒಣಗಹಾಕಿದರೆ ಬೆಚ್ಚಗಾಗುವದು. ಇವೆರಡರ ಕಾರಣವು ಒಂದೇ ಇರುವದು. ಜನರು ಬೇಸಿಗೆಯಲ್ಲಿಯೂ ಚಳಿಗಾಲದಲ್ಲಿಯೂ ಒಂದೇ ತರದ ಬಟ್ಟೆಗಳನ್ನು ಧರಿಸುವರೇನು ?

ರಂ—ಇಲ್ಲ; ಚಳಿಗಾಲದಲ್ಲಿ ಉಣ್ಣೆಯ ಬಟ್ಟೆಗಳನ್ನೂ ಬೇಸಿಗೆಯಲ್ಲಿ ಹತ್ತಿಯ ಬಟ್ಟೆಗಳನ್ನೂ ಧರಿಸುವರು.

ಅ—ಅವರು ಹೀಗೆ ಯಾಕೆ ಮಾಡುತ್ತಾರೆ ?

ಪಾ—ಉಣ್ಣೆಯು ಬೆಚ್ಚಗಿರುವದರಿಂದ ಚಳಿಗಾಲದ ಅರಿವೆಗಳು ಉಣ್ಣೆಯವಿರುತ್ತವೆ.

ಅ—ಇಗೋ, ನೀನು ಈ ಉಣ್ಣೆಯ ಅರಿವೆಯನ್ನು ತಕ್ಕೋ. ಅದು ಬೆಚ್ಚಗಿರುವದೇನು ?

ನ—ಅಕ್ಕನವರೇ, ಇದು ಬೆಚ್ಚಗಿಲ್ಲ.

ಅ—ಅಂದ ಮೇಲೆ ಉಣ್ಣೆಯು ಬೆಚ್ಚಗಿರುವದೆಂದು ಯಾಕೆ ಅನ್ನುವಿರಿ ?

ರಂ—ನಾವು ಉಣ್ಣೆಯ ಅರಿವೆಗಳನ್ನು ತೊಟ್ಟರೆ ನಮಗೆ ಚಳಿಯಾಗುವದಿಲ್ಲ. ಇಷ್ಟೇ ಅಲ್ಲ, ಸ್ವಲ್ಪ ಸೆಕೆಯೆನಿಸುವದು.

ಅ—ಒಳ್ಳೆಯದು, ಈ ಗೊಂಬೆಯನ್ನು ಮುಟ್ಟಿ ನೋಡಿರಿ. ಇದು ತಣ್ಣಗೆ ಹತ್ತುವದೋ? ಬಿಸಿಯಾಗಿರುವದೋ?

ರಾ—ಇದು ತಣ್ಣಗಿರುವದು.

ಅ—ಇಗೋ ಇದನ್ನು ಉಣ್ಣೆಯ ಅರಿವೆಯಲ್ಲಿ ಸುತ್ತಿಡುತ್ತೇನೆ. ಚಳಿಗಾಲಕ್ಕೆ ಉಣ್ಣೆಯ ಬಟ್ಟೆಗಳನ್ನು ಮಾಡಿಸುವದಾಗದವರು ಯಾವ ಬಟ್ಟೆಗಳನ್ನು ತೊಡುವರು?

ಪಾ— ಅವರು ಹತ್ತಿಯ ಬಟ್ಟೆಗಳನ್ನು ಧರಿಸುವರು.

ಅ—ಹೌದು; ದಪ್ಪಾದ ಬಟ್ಟೆಗಳನ್ನು ತೊಡುವದರಿಂದ ಕಡಿಮೆ ಚಳಿ ಹತ್ತುತ್ತದೆ. ಬಟ್ಟೆಗಳು ಹೆಚ್ಚು ದಪ್ಪಾದವೂ ಒರಟಾದವೂ ಇರುವಂತೆ ದೇಹದ ಉಷ್ಣತೆಯನ್ನು ಕಡಿಮೆಯಾಗಿ ಹೊರಗೆ ಹೋಗಗೊಡುತ್ತವೆ. ಬಟ್ಟೆಗಳು ಎರಡು ಪದರಾಗಿದ್ದರೆ ಬಹಳ ಒಳ್ಳೆಯದು. ರಜಾಯಿಗಳಂತೆ ಅವುಗಳಲ್ಲಿ ಹತ್ತಿಯನ್ನು ತುಂಬಿದರೆ ಅವು ಉಣ್ಣೆಯ ಅರಿವೆಗಳ ಕೆಲಸವನ್ನು ಮಾಡುವವು. ಇನ್ನು ಆ ಗೊಂಬೆಗೆ ಸುತ್ತಿದ ಉಣ್ಣೆಯ ಅರಿವೆಯನ್ನು ತೆಗೆದು ಗೊಂಬೆಗೆ ಸೆಕೆಯೆನಿಸಿದಂತೆ ಕಾಣುವದೋ ಹ್ಯಾಗೆ ನೋಡಿರಿ.

ರಂ—ಅಕ್ಕನವರೇ, ಇಲ್ಲ. ಸೆಕೆಯೆನಿಸಿದರೆ ನಾವು ಬೆವರುವಂತೆ ಅದು ಬೆವತಿಲ್ಲ.

ಅ—ಒಳ್ಳೆಯದು, ಗೊಂಬೆಯ ಮೈಯು ಬೆಚ್ಚಗಾಗಿದೆಯೋ?

ರಾ—ಇಲ್ಲ, ಅದರ ಮೈಯು ಬೆಚ್ಚಗಾಗಿಲ್ಲ.

## ೬೧ನೆಯ ಪಾಠ.

## ಬಟ್ಟೆಗಳು. (ಭಾಗ ೩.)

ಅ—ನಿನ್ನೆ ನಾವು ಒಂದು ಗೊಂಬೆಯನ್ನು ಉಣ್ಣೆಯ ಅರಿವೆಯಲ್ಲಿ ಸುತ್ತಿಟ್ಟು ನೋಡಿದೆವು. ಅದು ಬೆಚ್ಚಗಾಗಲಿಲ್ಲ. ಅದಕ್ಕೆ ಬೆವರೂ ಬರಲಿಲ್ಲ. ಇದರಿಂದ ಉಣ್ಣೆಯು ಬೆಚ್ಚಗಿರುವದಿಲ್ಲೆಂದು ನಿಮಗೆ ಗೊತ್ತಾಗುವದಷ್ಟೇ. ಅದು ಬೆಚ್ಚಗಿದ್ದರೆ ಗೊಂಬೆಯು ಬೆಚ್ಚಗಾಗುತ್ತಿತ್ತು. ಉಣ್ಣೆಯು ಬೆಚ್ಚಗಿರದಿದ್ದರೂ ನಮ್ಮ ಶರೀರದಲ್ಲಿ ಉಷ್ಣತೆಯನ್ನು ಯಾಕೆ ಉಂಟುಮಾಡುವದೆಂಬದನ್ನು ಪರೀಕ್ಷಿಸೋಣ. ಉಣ್ಣೆಯಲ್ಲಿ ಉಷ್ಣತೆಯಿರದಿದ್ದರೂ ನಮ್ಮ ಶರೀರದ ಉಷ್ಣತೆಯನ್ನು ಹೋಗಗೊಡದೆ ಕಾಯುವ ಗುಣವಿರುವದು; ಅಂದರೆ ಅದು ನಮ್ಮ ಶರೀರದ ಉಷ್ಣತೆಯನ್ನು ಹೊರಗೆ ಹೋಗಗೊಡುವದಿಲ್ಲ. ಜನರು ಬೇಸಿಗೆಯಲ್ಲಿ ತಿಳುವಾದ ಹತ್ತಿಯ ಬಟ್ಟೆಗಳನ್ನು ತೊಡುವ ಕಾರಣವೇನು?

ಪಾ—ಬೇಸಿಗೆಯಲ್ಲಿ ಚಳಿಯು ಇರುವದಿಲ್ಲ.

ಅ—ನೀನು ಹೇಳಿದ್ದು ತಕ್ಕಮಟ್ಟಿಗೆ ನಿಜವು. ಬೇಸಿಗೆಯಲ್ಲಿ ಮೈಯೊಳಗಿನ ಉಷ್ಣತೆಯು ಹೊರಗೆ ಹೋಗುವದಿಲ್ಲ. ಆದ್ದರಿಂದ ಆಗ ಉಣ್ಣೆಯ ಅರಿವೆಗಳನ್ನು ತೊಡಬೇಕಾಗುವದಿಲ್ಲ. ಹೊರಗಿನ ಉಷ್ಣತೆಯು ನಮ್ಮ ಮೈ ಸೇರದಿರಲಿಕ್ಕೆ ಬೇಕಾಗುವಷ್ಟು ಬಟ್ಟೆಗಳನ್ನು ಮಾತ್ರ ತೊಡಬೇಕಾಗುವದು. ಆದ್ದರಿಂದಲೇ ಬೇಸಿಗೆಯಲ್ಲಿ ಹತ್ತಿಯ ಬಟ್ಟೆಗಳನ್ನು ಹಾಕಿಕೊಂಡರೆ ಸಾಗುವದು. ಒಳ್ಳೆಯದು, ಬೇಸಿಗೆಯಲ್ಲಿ ಬಟ್ಟೆಗಳನ್ನೇ ತೊಡದಿದ್ದರೆ ಏನಾಗುವದು?

ರಾ—ನನಗಂತೂ ಬೇಸಿಗೆಯಲ್ಲಿ ಬಟ್ಟೆಗಳೇ ಬೇಕಾಗುವದಿಲ್ಲ.

ಅ—ಬೇಸಿಗೆಯಲ್ಲಿ ಬಟ್ಟೆಗಳು ಬೇಡೆನಿಸುವದು ನಿಜವೇ. ಮೈ ಬೆವತಾಗ ಬಟ್ಟೆಗಳಿಂದ ಕಸವಿಸಿಯಾಗುವದು. ಆದರೆ ಬಟ್ಟೆಗಳನ್ನೇ ಹಾಕಿಕೊಳ್ಳದಿದ್ದರೆ ಆರೋಗ್ಯವು ಕೆಡುವದು. ಅತಿ ಸೆಕೆಯಿಂದ ಮೈಯು

ಕಪ್ಪಾಗುವದು. ಇದಲ್ಲದೆ ಬರಿಮೈಯಲ್ಲಿದ್ದರೆ ಮೈ ಸುಟ್ಟಂತೆ ಆಗುವದು, ಹಾಗು ಬಹಳ ತ್ರಾಸವಾಗುವದು; ಜ್ವರವು ಬರುವದು; ಒಮ್ಮೊಮ್ಮೆ ಪ್ರಾಣವೂ ಹೋಗುವದು.

ರಂ—ನಾವು ಉಣ್ಣೆಯ ಹಾಗು ಹತ್ತಿಯ ಅರಿವೆಗಳ ಬಗ್ಗೆ ಕಲಿತೆವು. ರೇಶಿಮೆಯ ಬಟ್ಟೆಗಳ ಬಗ್ಗೆ ನಮಗೆ ಏನೂ ಗೊತ್ತಾಗಿಲ್ಲ.

ಅ—ಇನ್ನೂ ಹಲವು ಬಗೆಯ ಬಟ್ಟೆಗಳ ಬಗ್ಗೆ ಹೇಳುವದುಳಿದಿದೆ. ಉಣ್ಣೆಯು ಸಾವಕಾಶವಾಗಿ ಉಷ್ಣತೆಯನ್ನು ಹೋಗಗೊಡುವದು. ಅದರಿಂದ ಅದಕ್ಕೆ ಮಂದೋಷ್ಣತಾವಾಹಕವೆನ್ನುವರು. ಅದಕ್ಕೆ ವಿರುದ್ಧವಾಗಿ ಹತ್ತಿಯು ತೀವ್ರವಾಗಿ ಉಷ್ಣತೆಯನ್ನು ಹೋಗಗೊಡುವದರಿಂದ ಅದಕ್ಕೆ ತೀಕ್ಷ್ಣೋಷ್ಣತಾವಾಹಕವೆನ್ನುತ್ತಾರೆ. ರೇಶಿಮೆಯೂ ನಾರೂ ತೀಕ್ಷ್ಣೋಷ್ಣತಾವಾಹಕಗಳಿರುತ್ತವೆ. ಆದ್ದರಿಂದ ಚಳಿಗಾಲದಲ್ಲಿ ಇವುಗಳ ಬಟ್ಟೆಯನ್ನು ಉಪಯೋಗಿಸಿದರೆ ನಡೆಯುವದಿಲ್ಲ. ಇವು ದಪ್ಪಾಗಿಯೂ ಒರಟಾಗಿಯೂ ಇದ್ದರೆ ತೀರ ಸ್ವಲ್ಪ ಉಷ್ಣತೆಯನ್ನು ಮಾತ್ರ ಹೊರಗೆ ಹೋಗಗೊಡುವವು. ಒರಟಾದ ಬಟ್ಟೆಗಳೂ ಉಣ್ಣೆಯ ಬಟ್ಟೆಗಳೂ ಬೆವರನ್ನು ಹೀರಿಕೊಳ್ಳುತ್ತವೆ. ಇವುಗಳನ್ನು ಧರಿಸಿದರೆ ನೆಗಡಿಯಾಗುವ ಹೆದರಿಕೆ ಇಲ್ಲ. ಆದ್ದರಿಂದ ಬಹಳ ಚಳಿ ಬಿದ್ದಾಗ ಮೈಗೆ ಹತ್ತಿ ಉಣ್ಣೆಯ ಇಲ್ಲವೆ ಹತ್ತಿಯ ಒರಟಾದ ಬಟ್ಟೆಗಳನ್ನು ತೊಡುವದು ಒಳ್ಳೆಯದು. ನೀವು ತರತರದ ಬಣ್ಣದ ಬಟ್ಟೆಗಳನ್ನು ತೊಡುವ ಕಾರಣವೇನು?

ರಂ—ಇವುಗಳಿಂದ ನಾವು ಚೆಂದ ಕಾಣುತ್ತೇವೆ.

ಅ—ನೀನು ಹೇಳುವದು ನಿಜವು. ಆದರೆ ಬಣ್ಣಗಳಿಂದ ಶರೀರದ ಮೇಲೆ ಆಗುವ ಪರಿಣಾಮಗಳು ನಿಮಗೆ ಗೊತ್ತಿಲ್ಲ. ಕಪ್ಪು ಬಣ್ಣವೂ ಕಪ್ಪಿನ ಮೇಲಿನ ಬಣ್ಣಗಳೂ ಉಷ್ಣತೆಯನ್ನು ಹೀರಿಕೊಳ್ಳುತ್ತವೆ. ಬಿಳಿಯ ಬಟ್ಟೆಗಳಿಗಿಂತ ಇವುಗಳಿಂದ ಸೆಕೆ ಹೆಚ್ಚು. ಈ ಕಾರಣದಿಂದಲೇ ಬೇಸಿಗೆಯಲ್ಲಿ ಬಿಳಿಯ ಬಟ್ಟೆಗಳನ್ನೂ, ಚಳಿಗಾಲದಲ್ಲಿ ಕರಿಯ ಬಟ್ಟೆಗಳನ್ನೂ

ಧರಿಸಬೇಕು. ಈಗ ನಿಮಗೆ ನಾಲ್ಕು ಸಂಗತಿ ಗೊತ್ತಾದವು. (೧) ಫ್ಲಾನಲ್ ಹಾಗು ಇತರ ಉಣ್ಣೆಯ ಅರಿವೆಗಳು ಮಂದೋಷ್ಣತಾವಾಹಕಗಳೂ ಬೆವರನ್ನು ಹೀರಿಕೊಳ್ಳುವ ಗುಣವುಳ್ಳವೂ ಇರುತ್ತವೆ. ಅದರಿಂದ ಇವುಗಳನ್ನು ಚಳಿಗಾಲದಲ್ಲಿಯೂ ಮಳೆಗಾಲದಲ್ಲಿ ಬಹಳ ಚಳಿ ಬಿದ್ದ ಸಮಯದಲ್ಲಿಯೂ ತೊಡಬೇಕು. (೨) ಕಪ್ಪು ಬಣ್ಣವು ಉಷ್ಣತೆಯನ್ನು ಹೀರಿಕೊಳ್ಳುವದು; ತಂಪನ್ನು ಒಳಗೆ ಬಿಡುವದಿಲ್ಲ. ಆದ್ದರಿಂದ ಕಪ್ಪು ಬಣ್ಣದ ಅರಿವೆಗಳನ್ನು ಚಳಿಗಾಲದಲ್ಲಿ ಧರಿಸಬೇಕು. (೩) ಹತ್ತಿ, ರೇಶಿಮೆ, ನಾರು ಇವು ತೀಕ್ಷ್ಣೋಷ್ಣತಾವಾಹಕಗಳಾದ್ದರಿಂದ ಇವುಗಳ ಬಟ್ಟೆಗಳನ್ನು ಬೇಸಿಗೆಯಲ್ಲಿ ಹಾಕಿಕೊಳ್ಳಬೇಕು. (೪) ಬಿಳಿಯ ಬಣ್ಣದ ಹಾಗು ಮಸಕು ಬಣ್ಣಗಳ ಅರಿವೆಗಳು ಉಷ್ಣತೆಯನ್ನು ಹೊರದೂಡುವದರಿಂದ ಇವುಗಳನ್ನು ಬೇಸಿಗೆಯಲ್ಲಿಯೂ ಬಹಳ ಸೆಕೆಯಾಗುವ ದಿನಗಳಲ್ಲಿಯೂ ತೊಟ್ಟುಕೊಳ್ಳಬೇಕು.

---

## ೬೨ನೆಯ ಪಾಠ.

## ಮನೆಯ ಸ್ವಚ್ಛತೆ. (ಭಾಗ ೧.)

ಅಕ್ಕನವರು—ಈ ದಿನ ಮನೆಯನ್ನು ಸ್ವಚ್ಛವಿಡುವ ಬಗ್ಗೆ ಹೇಳುತ್ತೇನೆ. ಮನೆಯನ್ನು ಸ್ವಚ್ಛವಿಡುವದು ಆವಶ್ಯಕವೆಂದು ಎಲ್ಲರಿಗೂ ಗೊತ್ತಿರುವದು. ಆದರೂ ಹಾಗೆ ಮಾಡುವವರು ತೀರ ಸ್ವಲ್ಪ ಜನರಿರುವರು. ಇದು ನಿಜವಲ್ಲವೇ?

ಯಮುನೆ—ಅಕ್ಕನವರೇ, ನೀವು ಹೇಳುವದು ನನಗೆ ನಿಜವೆಂದು ತೋರುವದಿಲ್ಲ. ದಿನಾಲು ಮುಂಜಾನೆ ಎದ್ದ ಕೂಡಲೆ ಎಲ್ಲ ಹೆಂಗಸರು ಕಸ ಉಡುಗಿ ಮನೆಯನ್ನು ಸ್ವಚ್ಛ ಮಾಡುತ್ತಾರಲ್ಲ!

ಅ—ಹೌದು, ಮಕ್ಕಳಿರಾ, ದಿನಾಲು ಬೆಳಿಗ್ಗೆ ಮನೆಯ ಕಸ ಉಡುಗುವ ರೂಢಿಯು ನಮ್ಮ ದೇಶದ ಜನರಲ್ಲಿ ಇರುವದು. ಆದರೆ ಬರೇ ಕಸ

ಉಡುಗುವದರಿಂದ ಮನೆಯು ಪೂರಾ ಸ್ವಚ್ಛವಾಗುವದಿಲ್ಲ. ಎಚ್ಚರದಿಂದ ಕಸವುಡುಗದಿದ್ದರಂತೂ ಅದು ಸ್ವಚ್ಛವಾಗುವದೇ ಇಲ್ಲ. ಕಸ ಉಡುಗುವ ಕಸಬರಿಗೆಗಳು ಸರಿಯಾಗಿರಬೇಕು. ಹಾಗು ಪ್ರತಿಯೊಂದು ಸ್ಥಳವನ್ನು ನಾವು ಸ್ವಲ್ಪ ಸಹ ಕಸವುಳಿಯದಂತೆ ಉಡುಗಬೇಕು. ಒಕ್ಕಲಗಿತ್ತಿಯು ಕಸವುಡುಗುವಾಗ ಸಂದಿಗೊಂದಿಗಳನ್ನು ಸ್ವಚ್ಛವಾಗಿ ಉಡುಗುವದಿಲ್ಲ. ಕಸವು ಪೆಟ್ಟಿಗೆ, ಅಡಕಲಗಡಿಗೆ ಇವುಗಳ ಹಿಂದೆ ಕೂಡಬೀಳುವದು.

ಕಮಲೆ—ಡಬ್ಬಿ-ಗಡಿಗೆಗಳ ಸಂದಿಗೊಂದಿಗಳನ್ನು ಪ್ರತಿ ದಿವಸ ಉಡುಗಿ ಹ್ಯಾಗೆ ತೆಗೆಯಬೇಕು?

ಅ—ನೀವು ದಿನಾಲು ಇಲ್ಲವೆ ಮೂರು ನಾಲ್ಕು ದಿನಕ್ಕೊಮ್ಮೆ ಯಾದರೂ ಅಲ್ಲಿಯ ಹೊಲಸನ್ನು ತೆಗೆಯಬೇಕು. ಇಲ್ಲದಿದ್ದರೆ ಚೇಳು, ಜಿರ್ಲೆ ಮೊದಲಾದ ಹುಳುಹುಪ್ಪಡಿಗಳು ಅಲ್ಲಿ ಅಡಗಿ ಕೂಡ್ರುತ್ತವೆ. ಅಲ್ಲಿ ಕಾಳುಕಡಿಗಳು ಬೀಳುವದರಿಂದ ಇಲಿಗಳಿಗೆ ಔತಣ ಸಿಗುವದು. ಅವು ಅಲ್ಲಿ ಹೋರುಗಳನ್ನು ಮಾಡಿಕೊಂಡು ಇರುತ್ತವೆ. ಇಲಿಗಳಿರುವಲ್ಲಿಗೆ ಹಾವುಗಳು ಬರುವವು. ಇದಲ್ಲದೆ ಪ್ಲೇಗಿನ ದಿವಸಗಳಲ್ಲಿ ಇವು ಆ ರೋಗ ವನ್ನು ಹಬ್ಬಿಸುತ್ತವೆ. ಮೂಲೆಗಳನ್ನೂ ಸಂದಿಗಳನ್ನೂ ಉಡುಗುವಂತೆ, ಗೋಡೆ, ರಾಡು, ಸಾಮಾನುಗಳನ್ನು ಸಹ ಸ್ವಚ್ಛ ಮಾಡುವದು ಅವಶ್ಯ ವಾದದ್ದು.

ಗಂಗು—ನಮ್ಮ ಕೈಗೆ ನಿಲುಕುವ ತನಕ ಗೋಡೆಗಳನ್ನು ಸ್ವಚ್ಛ ಮಾಡಬಹುದು. ಅದರ ಮೇಲಿನ ಭಾಗಗಳನ್ನೂ ರಾಡುಗಳನ್ನೂ ಹ್ಯಾಗೆ ಉಡುಗಬೇಕು? ಅವುಗಳನ್ನು ಸ್ವಚ್ಛವಾಗಿ ಉಡುಗದಿದ್ದರೆ ಏನಾಗು ತ್ತದೆ?

ಅ—ಕೈಗೆ ನಿಲುಕದ ಭಾಗಗಳನ್ನು ಸ್ವಚ್ಛ ಮಾಡುವದಕ್ಕೆ ಒಂದು ಕೋಲಿನ ತುದಿಗೆ ಅರಿವೆಯ ಚೂರುಗಳನ್ನು ಕಟ್ಟಿ ಕಸಬರಿಗೆಯನ್ನು ಮಾಡುವದು. ಜೇಡಗಳು ಎತ್ತರ ಸ್ಥಳಗಳಲ್ಲಿ ಮನೆ ಕಟ್ಟುತ್ತವೆ. ಅಲ್ಲಿ

ಬಹಳ ಹೊಲಸು ಕೂಡಬೀಳುವದು. ಗಾಳಿ ಬಂದಾಗ ಈ ಹೊಲಸು ಕೆಳಗೆ ಉದುರುವದು; ಹೊಲಸು ಗೋಡೆಗಳಿಗೆ ಸ್ಪೃತಗಲಿದರೆ ಶರೀರವು ಹೊಲಸಾಗುವದು. ಬಟ್ಟೆಗಳು ತಾಕಿದರೆ ಅವು ಮಾಸುವವು. ಮನೆಯ ಪಾತ್ರೆಗಳ ಹಾಗು ಸಾಮಾನುಗಳ ಮೇಲೆ ಕಸ ಕೂತರೆ ಅವು ಅಸಹ್ಯ ಕಾಣುವವು. ನಕ್ಷೆಯ ಕೆಲಸಗಳಿಂದ ಅಂದವಾಗಿ ಕಾಣುವ ಕಪಾಟು-ಪೆಟ್ಟಿಗೆಗಳ ಮೇಲೆ ಬಿದ್ದಿರುವ ಎಲ್ಲ ಕಸವನ್ನು ತಕ್ಕಷ್ಟು ಎಚ್ಚರದಿಂದ ತೆಗೆಯುವ ರೂಢಿಯಿಲ್ಲ.

ಸರಸ್ವತಿ—ನಕ್ಷೆಯ ಕೆಲಸವಿರುವಲ್ಲಿ ಸಂದಿನೊಳಗೆ ಕೂತ ಕಸವನ್ನು ಹ್ಯಾಗೆ ಉಡುಗಿ ತೆಗೆಯಬಹುದು?

ಅ—ಕಟ್ಟಿಗೆಯ ಸಾಮಾನುಗಳನ್ನೂ ಉಡುಗಿ ಹಸನವಿಡುವದಾಗದು. ಕೆಲವು ದಿನಕ್ಕೊಮ್ಮೆ ಅವುಗಳನ್ನು ಸಬಕಾರದ ಇಲ್ಲವೆ ಸೀಗೆಕಾಯಿಯ ನೀರಿನಿಂದ ತಿಕ್ಕಿತೊಳೆದು ಒಂದು ಅರಿವೆಯಿಂದ ಜಳಜಳ ಒರಿಸಬೇಕು. ಇಂಥ ಸಾಮಾನುಗಳಿಗೆ ಸ್ವಲ್ಪ ಮೇಣ ಕೂಡಿಸಿದ ಎಣ್ಣೆಯನ್ನಾಗಲಿ, ಬರೆ ಎಣ್ಣೆಯನ್ನಾಗಲಿ ಹಚ್ಚಿ ಅರಿವೆಯಿಂದ ತಿಕ್ಕಿದರೆ ಹೊಳವು ಬರುವದು. ಅವುಗಳ ಮೇಲೆ ಬಹಳ ಕಸವನ್ನು ಕೂಡಗೊಡದಿರುವದೇ ಉತ್ತಮವಾದದ್ದು. ದಿನಾಲು ಅವುಗಳನ್ನು ಒಂದು ಉರುಟು ಅರಿವೆಯಿಂದಾಗಲಿ, ಬ್ರಶ್ಶಿನಿಂದಾಗಲಿ ಒರಿಸಿದರೆ ಕಸವು ಕೂಡಲಾರದು. ಇದಲ್ಲದೆ ಕೋಣೆಯನ್ನು ಉಡುಗುವಾಗ ಇಂಥ ಸಾಮಾನುಗಳ ಮೇಲೆ ಅರಿವೆಯನ್ನು ಹೊಚ್ಚಬೇಕು. ಕಸವುಡುಗುವಾಗ ಸಾಮಾನುಗಳ ಮೇಲೆ ಹೊಲಸು ಕೂಡುವದು; ಆದ್ದರಿಂದ ಕಸವುಡುಗುವದಾದ ಕೂಡಲೆ ಸಾಮಾನುಗಳ ಮೇಲೆ ಬ್ರಶ್ಶಿನಿಂದ ಕೈಯಾಡಿಸಬೇಕು. ಕೋಣೆಯಲ್ಲಿ ಕಸವು ಹೆಚ್ಚಾದರೆ ಧೂಳಿಯ ಕಣಗಳು ಹಾರಿ ಸಾಮಾನುಗಳ ಮೇಲೆ ಹೆಚ್ಚಾಗಿ ಕೂಡುವವು.

ಯ—ಮನೆಯನ್ನು ದಿನಾಲು ಸ್ವಚ್ಛವಾಗಿ ಉಡುಗುತ್ತಿದ್ದರೆ ಅಲ್ಲಿ ಕಸವಾಗಲಿ ಧೂಳಿಯ ಕಣವಾಗಲಿ ಎಲ್ಲಿಂದ ಬರುವದು?

ಅ—ಇಂಥ ಸ್ಥಳದಲ್ಲಿಯೂ ಪ್ರತಿದಿನ ಕಸವು ಕೂಡಬೀಳುತ್ತಿರುವದು. ಉದಾಹರಣಾರ್ಥವಾಗಿ ಸಂದಿಗೊಂದಿಗಳನ್ನೂ ಮೂಲೆಗಳನ್ನೂ ಪ್ರತಿದಿನ ಉಡುಗುವದಿಲ್ಲೆಂಬದನ್ನು ನಾನು ಈಗ ಹೇಳಿದೆನಷ್ಟೇ? ದಿನಾಲು ಉಡುಗುವಾಗ ನೆಲದ ಮೇಲೆ ಹಾಸಿದ ಚಾಪೆ ಕಂಬಳಿಗಳನ್ನು ತೆಗೆದು ಅವುಗಳ ಕೆಳಗಿರುವ ಕಸವನ್ನು ಉಡುಗಿ ಸ್ವಚ್ಛ ಮಾಡುವದಿಲ್ಲ; ಅದರ ಮೇಲಿನ ಕಸವನ್ನಷ್ಟೇ ಮಾತ್ರ ಉಡುಗುವರು.

---

## ೬೩ನೆಯ ಪಾಠ.

## ಮನೆಯ ಸ್ವಚ್ಛತೆ. (ಭಾಗ ೨.)

ಅ—ಮನೆಯ ಸ್ವಚ್ಛತೆಯ ಬಗ್ಗೆ ನಿನ್ನೆ ಮಾತಾಡುವಾಗ ನಾನು ಎಲ್ಲಿಗೆ ಬಿಟ್ಟೆನು? ಹೇಳಿರಿ.

ಯ—ನೆಲದ ಮೇಲೆ ಹಾಸಿದ ಚಾಪೆ-ಕಂಬಳಿಗಳ ಕೆಳಗಿನ ಕಸವನ್ನು ಉಡುಗುವದಿಲ್ಲವೆಂದು ಕೊನೆಗೆ ಹೇಳಿದಿರಿ.

ಅ—ಕಂಬಳಿ-ಗುಡಾರಗಳನ್ನು ಜಾಡಿಸಿ ಕಸ ತೆಗೆಯುವಾಗ ಅವುಗಳಿಂದ ಹೊರಡುವ ಧೂಳಿಯ ಕಣಗಳು ಎಲ್ಲ ಕಡೆಗೆ ಹಾರುತ್ತವೆ. ಇವುಗಳ ಕೆಳಗೆ ಬಿದ್ದಿರುವ ಕಸವನ್ನು ಉಡುಗುವಾಗ ಸಹ ಇಂಥ ಕಣಗಳು ಹಾರಹತ್ತುತ್ತವೆ. ಇವುಗಳಿಂದ ಕೋಣೆಯೊಳಗಿನ ಸಾಮಾನುಗಳೆಲ್ಲ ಹೊಲಸಾಗುತ್ತವೆ. ಆದ್ದರಿಂದ ಕಂಬಳಿ-ಗುಡಾರಗಳನ್ನು ಮನೆಯ ಹೊರಗೆ ಒಯ್ದು ಜಾಡಿಸಿ ಸ್ವಚ್ಛ ಮಾಡಬೇಕು. ಅವುಗಳ ಕೆಳಗೆ ಕಸವು ಇದ್ದರೆ ಮೊದಲು ನೀರು ಚಿಮುಕಿಸಿ ಕಸ ಉಡುಗಬೇಕು. ಅಂದರೆ ಧೂಳಿಯು ಹಾರಿ ಸುತ್ತಲಿರುವ ಸಾಮಾನುಗಳ ಮೇಲೆ ಕೂಡುವದಿಲ್ಲ. ಯಮುನೆ, ನಿಮ್ಮ ಮನೆಯಲ್ಲಿ ಪ್ರತಿದಿವಸ ಉಡುಗಿ ಸ್ವಚ್ಛ ಮಾಡದಂಥ ಭಾಗವು ಇರುವದೋ?

ಯ—ಅಕ್ಕನವರೇ, ಎರಡನೆಯ ಅಂತಸ್ತನ್ನೂ ಅಡಕಲ ಕೋಣೆ ಯನ್ನೂ ನಾವು ದಿನಾಲು ಉಡುಗುವದಿಲ್ಲ.

ಅ—ನಾವು ಯಾವಾಗಲೂ ಉಪಯೋಗ ಮಾಡದ ಕೋಣೆಯನ್ನು ಪ್ರತಿದಿನ ಉಡುಗದಿದ್ದರೂ ಮೇಲಿಂದ ಮೇಲೆ ನಿಯಮದಿಂದ ಉಡುಗ ಬೇಕು. ಮನೆಯ ಪ್ರತಿಯೊಂದು ಭಾಗವನ್ನೂ ಸ್ವಚ್ಛವಿಡಬೇಕು. ಗ್ರಹ ಣಗಳಾದರೆ, ಇಡೀ ಮನೆಯನ್ನು ಸ್ವಚ್ಛ ಮಾಡುವ ರೂಢಿಯು ನಮ್ಮಲ್ಲಿ ರುವದು. ಇದು ಒಳ್ಳೆಯ ರೂಢಿಯು. ಆದರೆ ಗ್ರಹಣಗಳು ಬಹಳ ದಿವಸ ಕ್ಕೊಮ್ಮೆ ಆಗುತ್ತವೆ. ಅಷ್ಟು ದಿವಸಗಳವರೆಗೆ ಹೊಲಸು ಕೂಡಗೊಡುವದು ಸರಿಯಲ್ಲ. ಪಡಸಾಲೆಗಳನ್ನೂ ಮಲಗುವ ಕೋಣೆಗಳನ್ನೂ ಉಳಿದ ಕೋಣೆ ಗಳನ್ನೂ ಉಡುಗುವಾಗ ಬಹಳ ಸಂಗತಿಗಳ ಕಡೆಗೆ ಲಕ್ಷ್ಯಕೊಡಬೇಕಾಗು ತ್ತದೆ. ಕಸ ಉಡುಗುವಾಗ ಆಳುಮಕ್ಕಳು ಬಾಗಿಲು, ಕಿಟಕಿ ಮೊದಲಾ ದವುಗಳ ಮೇಲಿರುವ ಹೊಲಸನ್ನು ತೆಗೆಯುವದೇ ಇಲ್ಲ.

ಕ—ಕೆಲವು ಆಳುಮಕ್ಕಳು ಇವುಗಳ ಮೇಲೆಯೂ ಕಸಬರಿಗೆಯನ್ನು ಆಡಿಸುವರು.

ಅ—ಕಸಬರಿಗೆಯನ್ನು ಆಡಿಸಿದ ಮಾತ್ರಕ್ಕೆ ಇವುಗಳಲ್ಲಿರುವ ಹೊಲಸು ಹೋಗುವದಿಲ್ಲ. ಒಂದು ಅರಿವೆಯಿಂದ ಜಾಡಿಸಿ ಇಲ್ಲವೆ ಒದ್ದೆ ಅರಿವೆಯಿಂದ ತಿಕ್ಕಿ ಅವುಗಳನ್ನು ಸ್ವಚ್ಛ ಮಾಡಬೇಕು. ಅವುಗಳ ಮೇಲೆ ಕಲೆ ಕೂತಿದ್ದರೆ ಸಬಕಾರದ ನೀರಿನಿಂದಾಗಲಿ ಸೀಗೆಕಾಯಿಯ ನೀರಿ ನಿಂದಾಗಲಿ ತೊಳೆದು ತೆಗೆಯಬೇಕು. ಗಚ್ಚಿನ ಇಲ್ಲವೆ ಬಣ್ಣದ ಗೋಡೆ ಗಳನ್ನು ಸಹ ಇದೇ ಮೇರೆಗೆ ಬಿಸಿ ನೀರಿನಿಂದ ತೊಳೆದು ಸ್ವಚ್ಛ ಮಾಡ ಬೇಕು. ದಿನಾಲು ಪಾವಟಿಗೆಗಳನ್ನು ನಿಯಮದಿಂದ ಉಡುಗಬೇಕು. ಅವುಗಳ ಬದಿಯಲ್ಲಿರುವ ಕಟಾಂಜನವನ್ನು ಉರುಟಾದ ಅರಿವೆಯಿಂದ ಜಾಡಿಸಿಯಾಗಲಿ, ಒದ್ದೆಯ ಅರಿವೆಯಿಂದ ತಿಕ್ಕಿ ತೊಳೆದಾಗಲಿ ಸ್ವಚ್ಛ ಮಾಡಬೇಕು. ಮನೆಯ ಸ್ವಚ್ಛತೆಯ ಬಗ್ಗೆ ಇನ್ನೇನಾದರೂ ಹೇಳತಕ್ಕ ದ್ದುಳಿದಿರುವದೋ?

ರಂ—ಏನೂ ಉಳಿದಂತೆ ಕಾಣುವದಿಲ್ಲ.

ಅ—ಇನ್ನೂ ಬಹಳ ಹೇಳುವದುಳಿದಿರುವದು. ಮನೆಯ ಅಂಗಳ, ಮೆಟ್ಟಲು ಹಾಗು ಪಡಸಾಲೆ ಇವುಗಳ ಬಗ್ಗೆ ನಾನು ಏನೂ ಹೇಳಿಲ್ಲ. ಅಂಗಳಕ್ಕೆ ಸಗಣಿಯ ನೀರು ಚಲ್ಲದಿದ್ದರೆ ದೊಡ್ಡ ಕಸಬರಿಗೆಯಿಂದ ಅದರ ಕಸ ಹೊಡೆಯಬೇಕು. ಗಚ್ಚಿನ ಇಲ್ಲವೆ ಕಲ್ಲಿನ ಪಾವಟಿಗೆಗಳನ್ನು ನೀರಿನಿಂದ ತೊಳೆಯಬೇಕು. ಕೆಲವರು ಅಂಗಳದಲ್ಲಿ ರಂಗೋಲಿ ಹಾಕಿ ಚೆಂದ ಕಾಣುವಂತೆ ಮಾಡುವರು. ಇದು ಒಳ್ಳೆಯ ರೂಢಿಯು; ಇದರಿಂದ ಆ ಭಾಗವು ಅಂದ ಕಾಣುವದು; ಹಾಗು ಸ್ವಚ್ಛವಾಗುವದು. ಮಣ್ಣಿನ ನೆಲವಿರುವಲ್ಲಿ ತೀವ್ರವಾಗಿ ಹೊಲಸೇಳುವದು. ಅಲ್ಲಿ ಸಗಣಿಯ ಹಕ್ಕಳಿಗಳು ಎದ್ದು ತಗ್ಗುಗಳಾಗಿ ಅವುಗಳೊಳಗಿಂದ ಬಹಳ ಮಣ್ಣೂ ಬರುವದು. ನೆಲವು ಬಹಳ ಅಸಹ್ಯ ಕಾಣುವದು. ಹಳ್ಳಿಗಳಲ್ಲಿ ಹೆಂಗಸರು ನೆಲವನ್ನು ಸಗಣಿಯ ನೀರಿನಿಂದ ಗಟ್ಟಿಯಾಗಿ ಸಾರಿಸಿ ಸ್ವಚ್ಛವಾಗಿ ಕಸವುಡುಗುವರು. ಆದ್ದರಿಂದ ಹಳ್ಳಿಯ ಮನೆಗಳು ಪಟ್ಟಣದ ಮನೆಗಳಿಗಿಂತ ಸ್ವಚ್ಛವಾಗಿರುತ್ತವೆ. ಹಳ್ಳಿಗಳಲ್ಲಿ ಮಣ್ಣಿನ ಗೋಡೆಗಳಿಗೆ ಸುಣ್ಣ ಹಚ್ಚುವರು. ಈ ಸುಣ್ಣದಲ್ಲಿ ಅಭ್ರಕವನ್ನು ಕೂಡಿಸುವದರಿಂದ ಗೋಡೆಗಳಿಗೆ ಹೊಳಪು ಬರುವದು. ಮನೆಯನ್ನು ಉಡುಗಿ ಬಂದ ಕಸವನ್ನು ಮೂಲೆಯಲ್ಲಿ ಕೂಡಹಾಕಬಾರದು. ಮ್ಯುನಿಸಿಪಾಲಿಟಿಯವರು ಇಟ್ಟ ತಿಪ್ಪಿಯ ಗುಂಡಿಯಲ್ಲಿ ಹಾಕಬೇಕು. ಇಂಥ ಗುಂಡಿಗಳು ಇಲ್ಲದಿದ್ದರೆ ಕಸವನ್ನು ಊರ ಹೊರಗೆ ಎಲ್ಲಿಯಾದರೂ ಒಯ್ದು ಚಲ್ಲಿಸಬೇಕು.

---

## ೬೪ನೆಯ ಪಾಠ.

## ಕಪ್ಪೆ.

"ನಾನು ತತ್ತಿಯಿಂದ ಹೊರಟಾಗ ಬಹಳ ಸಣ್ಣವನಿದ್ದೆನು. ಆಗ ತಲೆ-ಬಾಲಗಳ ಹೊರತು ನನಗೆ ಬೇರೆ ಅವಯವಗಳೇ ಇರಲಿಲ್ಲ; ಯಾವಾ

ಗಲೂ ನೀರಿನಲ್ಲಿ ಇರುತ್ತಿದ್ದೆನು. ಅಲ್ಲಿ ಈಸಾಡುವದು ನನಗೆ ಬಹಳ ಸೇರು ತ್ತಿತ್ತು. ಮೀನದಂತೆ ನನಗೆ ಉಸುರಾಡಿಸುವ ಎರಡು ಕಲ್ಲಿ (ಚೀಲ) ಗಳಿ ದ್ದವು; ಅವುಗಳಿಂದ ನಾನು ಉಸುರಾಡಿಸುತ್ತಿದ್ದೆನು. ನಾನು ಇಷ್ಟು ಸಣ್ಣ ವನಿದ್ದರೂ ಆಹಾರಕ್ಕೋಸ್ಕರ ಇನ್ನೊಬ್ಬರನ್ನು ಅವಲಂಬಿಸಲಿಲ್ಲ. ನನ್ನ ಆಹಾರವನ್ನು ನಾನೇ ಹುಡುಕಿ ತಿನ್ನುತ್ತಿದ್ದೆನು. ನಾನು ಮಾಂಸವನ್ನು ತಿನ್ನುತ್ತಿದ್ದಿಲ್ಲ; ಯಾಕೆಂದರೆ, ಮಾಂಸಾಹಾರಿಗಳಂತೆ ನನಗೆ ಹಲ್ಲುಗಳಿದ್ದಿಲ್ಲ; ಅದರಿಂದ ಜಲವನಸ್ಪತಿಗಳ ಸಣ್ಣಸಣ್ಣ ಮೆತ್ತನ್ನ ಗಡ್ಡೆ-ಬೇರುಗಳನ್ನು



ತಿಂದು ಇರುತ್ತಿದ್ದೆನು. ಆದರೆ ದೊಡ್ಡದೊಡ್ಡ ಮೀನಗಳು ಬಂದು ನನ್ನನ್ನು ಎಲ್ಲಿ ನುಂಗಿಬಿಡುವವೋ ಎಂಬ ಅಂಜಿಕೆಯು ನನಗೆ ಬಹಳ ಇತ್ತು. ನಾನು ಹುಳುಹುಪ್ಪಡಿಗಳನ್ನು ಕೊಲ್ಲುತ್ತಿದ್ದಿಲ್ಲ; ಅದರಿಂದ ಬಹಳ ಸಮಾಧಾನ ದಿಂದಿದ್ದೆನು. ಈ ಮೇರೆಗೆ ನಾನು ಏಳೆಂಟು ವಾರಗಳನ್ನು ಕಳೆದೆನು.

ಆ ಮೇಲೆ ಒಂದು ದಿನ ನನ್ನ ಬಾಲದ ಬುಡದ ಎರಡೂ ಮಗ್ಗಲಿಗೆ

ಎರಡು ಗಂಟುಗಳಾದವು. ಮತ್ತೊಂದು ದಿನ ಕುತ್ತಿಗೆಯ ಎಡಕ್ಕೊಂದು, ಬಲಕ್ಕೊಂದು ಹೀಗೆ ಎರಡು ಗಂಟುಗಳಾದವು. ಇದರಿಂದ ನಾನು ಎಲ್ಲಿ ಬೇನೆ ಬೀಳುವೆನೋ ಎಂದು ಬಹಳ ಹೆದರಿದ್ದೆನು. ಆದರೆ ಇಷ್ಟರಿಂದಲೇ ತೀರಲಿಲ್ಲ. ನನ್ನ ಬಾಲವು ಬರಬರುತ್ತ ಸಣ್ಣದಾಗುತ್ತ ನಡೆಯಿತು. ಇದ ರಿಂದ ಮುಂದೆ ನನ್ನ ಗತಿ ಏನಾಗುವದೋ ಎಂದು ಮತ್ತಿಷ್ಟು ಅಂಜಿ ದೆನು.

ಇಷ್ಟರಲ್ಲಿ ಆ ನಾಲ್ಕು ಗಂಟುಗಳಿಂದ ನಾಲ್ಕು ಕಾಲುಗಳು ಹೊರ ಬಿದ್ದವು. ಮುಂಗಾಲುಗಳಿಗೆ ನಾಲ್ಕುನಾಲ್ಕು, ಹಿಂಗಾಲುಗಳಿಗೆ ಐದೈದು ಬೆರಳುಗಳು ಆದವು. ಹಿಂಗಾಲಿನ ಬೆರಳುಗಳ ನಡುವೆ ತೆಳ್ಳನ್ನ ಪರೆಯಂಥ ಚರ್ಮವು ಉಂಟಾಗಲು ಅದರಿಂದ ನನಗೆ ಈಸಲಿಕ್ಕೆ ಅನುವಾಯಿತು. ಮುಂದೆ ನನ್ನ ಉಸುರಾಡಿಸುವ ಕಲ್ಲಿಗಳು ಹೋಗಹತ್ತಿದ್ದರಿಂದ, ನನಗೆ ನೀರಲ್ಲಿ ಉಸುರುಗಟ್ಟಿದಂತೆ ಆಗಹತ್ತಿತು. ಆಗ ನಾನು ನೀರ ಬಿಟ್ಟು ಹೊರಗೆ ಬರಲು ಸ್ವಲ್ಪ ಸಮಾಧಾನವಾಯಿತು. ಅಂದಿನಿಂದ ನಾನು ನೀರ ಹೊರಗೆ ಬಂದು ಪುಪ್ಪುಸಗಳಿಂದ ಉಸುರಾಡಿಸತೊಡಗಿದೆನು. ಈಗಾದರೂ ನೀರೊಳಗೆ ಇರುವದೂ ನೀರೊಳಗೆ ಆಡುವದೂ ನನಗೆ ಬಹಳ ಬೇಕು; ಯಾಕೆಂದರೆ ಮೀನಗಳಂತೆ ನನ್ನ ಮೈಯಲ್ಲಿ ತಂಪಾದ ರಕ್ತವು ಹರಿಯುವದು.



ನಾನು ಮೊದಲು ನೀರ ಬಿಟ್ಟು ಹೊರಗೆ ಬಂದು ಉಸು ರಾಡಿಸಹತ್ತಿದಾಗ, ನೆಲದ ಮೇಲಿನ ಪ್ರಾಣಿಗಳಂತೆ ನನಗೆ ಇನ್ನೂ ನಡೆಯಲಿಕ್ಕೆ ಬರುತ್ತಿದ್ದಿಲ್ಲ. ಆದರಿಂದ ನನಗೆ ತುಸು ತೊಂದರೆಯಾಗಹತ್ತಿತು.

ಒಂದು ದಿನ ಒಂದು ಹುಳವು ನನ್ನ ಮುಂದೆ ಹಾದು ಹೋಗುತ್ತಿರಲು ಅದನ್ನು ಹಿಡಿಯಬೇಕೆಂದು ನಾನು ಜಿಗಿದೆನು. ಅಂದಿನಿಂದ ನನ್ನ ಉದ್ದವಾದ ಹಿಂಗಾಲುಗಳ ಉಪಯೋಗವು ನನಗೆ ಗೊತ್ತಾಯಿತು. ನಾನು ಉದ್ದವಾದ ನನ್ನ ನಾಲಿಗೆಯನ್ನು ಚಾಚಿ, ಅದರ ಜಿಗಿಯಿಂದ ಆ ಹುಳುವನ್ನು ನಾಲಿಗೆಗೆ ಅಂಟಿಸಿಕೊಂಡು ಗಳಮ್ಮನೆ ನುಂಗಿಬಿಟ್ಟೆನು. ಮೇಲಿನ ದವಡೆಯಲ್ಲಿ ಕೆಲವು ಹಲ್ಲುಗಳು ನನಗುಂಟು. ಆದರೆ ಅವುಗಳಿಂದ ಆಹಾರವನ್ನು ಅಗಿಯಲಿಕ್ಕೆ ಬರುವದಿಲ್ಲ. ಆಕಾರಣ ಹಿಡಿದ ಹುಳುಹುಪ್ಪಡಿಗಳನ್ನು ನಾನು ಹಾಗೇ ನುಂಗಿಬಿಡುತ್ತೇನೆ. ನನ್ನ ದವಡೆಗಳ ಮಾನದಿಂದ ನನ್ನ ಕಣ್ಣೂ ತಲೆಯೂ ದೊಡ್ಡವವೆ. ಬಿಸಿಲುಗಾಲದಲ್ಲಿ ನನ್ನ ಪರೆಯು ಉಚ್ಚುತ್ತದೆ. ಅದನ್ನು ಸುತ್ತಿ ಗುಳಿಗೆ ಮಾಡಿ ನಾನು ತಿಂದುಬಿಡುತ್ತೇನೆ."

ಒಂದು ದಿನ ನಾಲ್ಕನೆಯ ಇಯತ್ತೆಯ ಹುಡುಗೆಯರು ನಿರೀಕ್ಷಣೆಯ ಪಾಠ ನಡೆದಾಗ ತೋಟದೊಳಗಿನ ಹೊಂಡದಲ್ಲಿರುವ ಕಪ್ಪೆಗಳನ್ನು ನೋಡಲಿಕ್ಕೆ ಹೋಗಿದ್ದರು. ಆಗ ಅಲ್ಲಿರುವ ಒಂದು ದೊಡ್ಡ ಕಪ್ಪೆಯು ತನ್ನ ಆತ್ಮವೃತ್ತವನ್ನು ಈ ರೀತಿಯಾಗಿ ಹೇಳಿತು. ಅದನ್ನು ಕೇಳಿ ತುಂಗಕ್ಕನು, ಹಾಗಾದರೆ ನೀವು ಯಾವ ವರ್ಗದ ಪ್ರಾಣಿಗಳು ಎಂದು ಕೇಳಿದಳು. ಅದಕ್ಕೆ ಆ ಕಪ್ಪೆಯು:—"ನಾವು ಪಕ್ಷಿಗಳಂತೆ ತತ್ತಿಗಳನ್ನಿಡುತ್ತೇವೆ; ಪಶುಗಳಂತೆ ನೆಲದ ಮೇಲೆ ಒಮ್ಮೊಮ್ಮೆ ಇರುತ್ತೇವೆ; ಮೀನಗಳಂತೆ ನೀರಲ್ಲಿಯೂ ಈಸ ಬಲ್ಲೆವು; ಕ್ರಿಮಿಕೀಟಗಳಂತೆ ನಮ್ಮ ರೂಪಾಂತರವಾಗುತ್ತದೆ. ಈ ಮೇರೆಗೆ ನಮ್ಮ ಚರಿತ್ರವು ಬಹಳ ಸೋಜಿಗವಾಗಿರುವದು," ಎಂದು ಹೇಳಿತು.

---

